# ಅಮೃತವಾಣಿ

ಪಂಚಶತಕ

(ಇಂದೂರಿನ ಶ್ರೀ ಧೂಳಿಚಂದಜೀಯವರ ಹಿಂದೀ ಗ್ರಂಥದ
ಕರ್ನಾಟಕಭಾಷಾನುವಾದ)

ಅನುವಾದಕರು ಮತ್ತು ಸಂಪಾದಕರು

**ಎಸ್. ಬೊಮ್ಮರಸಪಂಡಿತರು, ಮೈಸೂರು**

ಪ್ರಕಾಶಕರು

ಶ್ರೀ ಜಿ ಕೆ. ಡಿ. ಭರಮಯ್ಯನವರ ಧರ್ಮಪತ್ನಿ

**ಶ್ರೀಮತಿ ತಂಗ್ಯಮ್ಮನವರು**

ಮೈಸೂರು

**ಮೌಲ್ಯ. ಸದುಪಯೋಗ**

ಮುದ್ರಕರು:

ಟಿ. ಸಿ. ಬ್ರಹ್ಮಸೂರಯ್ಯ

ಜೈ ಹಿಂದ್ ಪ್ರೆಸ್

ವಾಣಿವಿಲಾಸ ರೋಡ್

ಮೈಸೂರು

1957

# ಸಂಪಾದಕನ ಮಾತು

---

ಪ್ರಕೃತಗ್ರಂಥವು, ಇಂದೂರಿನ ಉದಾಶೀನಾಶ್ರಮದಲ್ಲಿರುವ ಭ. ಬ್ರ ಧೂಲಿಚಂದಜೀ ಎಂಬವರಿಂದ ರಚಿತವಾಗಿ ಅಮರಗ್ರಂಥಾವಲಿಯ ಏಳನೇ ಪುಷ್ಪವಾಗಿ "ಅಮೃತವಾಣಿ" ಎಂಬ ಹೆಸರಿನಿಂದ ಪ್ರಕಟವಾಗಿರುವ ಒಂದು ಸಣ್ಣ ಹಿಂದೀ ಗ್ರಂಥದ ಕರ್ಣಾಟಕಭಾಷಾನುವಾದವಾಗಿದೆ ಸಂಗ್ರಹ ಕಾರರೂ, ಸಂಪಾದಕರೂ ಮತ್ತು ಪ್ರಕಾಶಕರೂ ಆದ ಬ್ರ. ಧೂಲಿಚಂದಜೀ ಯವರು ತಮ್ಮ ಗ್ರಂಥದ ಭೂಮಿಕೆಯಲ್ಲಿ "ಇದು ಒಂದು ಆಧ್ಯಾತ್ಮಿಕ ಗ್ರಂಥ ವಾಗಿದೆ, ಬಹಳ ಸಣ್ಣದು ಆದರೂ ಚಲ್ಲಿರುವ ಹೂಗಳನ್ನು ರಾಶಿಮಾಡಿದೆ. ಇದು ಮಾನವ ಜೀವನದ ಉತ್ಕರ್ಷಮಾರ್ಗವನ್ನು ತೋರಿಸುವ ಸ್ನೇಹಿತನಾ ಗುತ್ತದೆ ಈ ಸಂಚಯಕೃತಿಯು, ತಮ್ಮ ತಮ್ಮ ಪರಿಣಾಮಗಳನ್ನು ನಿರ್ಮಲ ಗೊಳಿಸುವುದರ ಜೊತೆಯಲ್ಲಿ ಜನ ಕಲ್ಯಾಣಕಾರಿಯೂ ಆಗುತ್ತದೆ, ಎಂಬ ಭಾವನೆಯ ಬಲದಮೇಲೆ ನಾನು ಈ ಪ್ರಯಾಸವನ್ನು ಮಾಡಿದ್ದೇನೆ

ಆಧ್ಯಾತ್ಮಿಕತೆಯಿಂದ ತುಂಬಿರುವ ದೊಡ್ಡ ದೊಡ್ಡ ಗ್ರಂಥಗಳಿಗೆ ಕಡಮೆ ಯೇನೂ ಇಲ್ಲ ಆದರೆ ಸ್ವಲ್ಪ ರುಚಿಯುಳ್ಳವರೂ ಮತ್ತು ಸಾಧಾರಣ ಜ್ಞಾನ ವುಳ್ಳವರೂ ಸಹ ಸ್ವಲ್ಪವಾದರೂ ಲಾಭ ಹೊಂದಬಲ್ಲರೋ ಎಂಬ ಅಭಿಪ್ರಾಯ ವನ್ನು ಮುಂದಿಟ್ಟುಕೊಂಡು ಈ ಗ್ರಂಥವನ್ನು ಸಂಕ್ಷೇಪವಾದ ಮತ್ತು ಸುಲಭ ವಾದ ರೀತಿಯಲ್ಲಿ ರಚಿಸಿದೆ ಈ ಗ್ರಂಥೋಕ್ತವಾದ ಮಾತುಗಳನ್ನು ತಿಳಿದು ವಿಚಾರಮಾಡಿ ಮನಸ್ಸಿಗೆ ತಂದುಕೊಂಡರೆ, ಆಗ ಮಾತ್ರ ಮಹಾತ್ಮರ ಅಮೃ ತಾಸ್ವಾದನದ ಆನಂದವು ಅನುಭವಕ್ಕೆ ಬರುತ್ತದೆ ಇದರಿಂದ ಅನಾದಿಕಾ ಲದ ಭ್ರಾಂತಿಮೂಲಕವಾದ ಕಲ್ಪನೆಗಳಿಂದ ಕೂಡಿದ ಕಲುಷಿತವೃತ್ತಿಯು ಪರಿ ಹಾರವಾಗಿ ಆತ್ಮಶಾಂತಿಯ ಶ್ರೇಯೋಮಾರ್ಗದಲ್ಲಿ ಅಭಿರುಚಿಯು ವೃದ್ಧಿಯಾ ಗುತ್ತದೆ. ಈ ಗ್ರಂಥವು ಓದುವವರಿಗೆ ಅಮೃತಕ್ಕೆ ಸಮಾನವಾಗಿಯೇ ಶಾಂತಿ ಪ್ರದಾಯಕವಾಗುವುದಾದರೆ, ನನ್ನ ಶ್ರಮವು ಸಫಲವಾಗುತ್ತದೆ" ಎಂದು ಹೇಳಿದ್ದಾರೆ

ಈ ಗ್ರಂಥದ ಶ್ರೇಷ್ಠತೆಯ ವಿಚಾರವಾಗಿ ನಾನು ಹೆಚ್ಚೇನನ್ನೂ ಹೇಳಬೇಕಾದ ಆವಶ್ಯಕತೆ ಕಂಡುಬರುವುದಿಲ್ಲ ಈ ಗ್ರಂಥದಲ್ಲಿ ಸಂಗ್ರಹವಾಗಿರುವ ಮಹಾತ್ಮರ ವಚನಗಳು ನಿಜವಾಗಿಯೂ ಅಮೃತಪಾನದಂತೆ ಅಪಾರವಾದ ಆನಂದವನ್ನುಂಟುಮಾಡುತ್ತವೆ ಎಂಬ ವಿಚಾರವು ಪಾಠಕರಿಗೆ ತಿಳಿದುಬಾರದಿರದು. ಈ ಆನಂದಾನುಭವವನ್ನು, ಹಿಂದೀ ಭಾಷೆಯನ್ನು ತಿಳಿಯದ ನಮ್ಮ ಕನ್ನಡಬಾಂಧವರಿಗೂ ಉಂಟುಮಾಡಿಕೊಡಬೇಕೆಂಬ ಸದುದ್ದೇಶದಿಂದ ಬೆಳಗಾಮಿನ ಮುಮುಕ್ಷುವರ್ಯ ೧೦೫ ಅತಿಬಲ ಮಹಾರಾಜರು ಈ ಗ್ರಂಥವನ್ನು ಕನ್ನಡಕ್ಕೆ ತರ್ಜುಮೆ ಮಾಡಿಕೊಡಬೇಕೆಂದು ನನ್ನನ್ನು ಕೇಳಿದರು ಅವರ ಅಪ್ಪಣೆಯಂತೆ ಮಾಡಿಕೊಟ್ಟಿರುತ್ತೇನೆ ನಾನು ಹಿಂದೀ ಭಾಷೆಯಲ್ಲಿ ಪಾಂಡಿತ್ಯವಿಲ್ಲದವನಾದರೂ, ಈ ಗ್ರಂಥವಾಚನದಿಂದುಂಟಾದ ಆನಂದದಿಂದ ಪ್ರೇರಿತನಾಗಿ, ನನಗೆ ದುಃಸಾಧ್ಯವಾದ ಕೆಲಸವನ್ನು ಮಾಡಲು ಹೊರಟಿದ್ದೇನೆ

ಗ್ರಂಥವು ಸಣ್ಣದಾದರೂ ಅಧ್ಯಾತ್ಮಸಂಬಂಧವಾದ ಅನೇಕ ಗಹನವಾದ ವಿಚಾರಗಳು ವಚನರೂಪದಲ್ಲಿ ಹೇಳಲ್ಪಟ್ಟಿವೆ

ಈ ಗ್ರಂಥದಲ್ಲಿ ವಚನಾಮೃತ-ಶತಕ, ಉಪದೇಶ-ಶತಕ, ಜ್ಞಾನ-ಶತಕ, ಅಧ್ಯಾತ್ಮ-ಶತಕ ಮತ್ತು ಶಾಂತಿ-ಶತಕಗಳೆಂಬ ಐದುಭಾಗಗಳಿವೆ ಇದರಿಂದ ಇದನ್ನು "ಅಮೃತವಾಣೀ–ಪಂಚಶತಕ" ವೆಂದು ಮೂಲಗ್ರಂಥಕಾರರು ಬರೆದಿರುತ್ತಾರೆ ಈ ಪಂಚಶತಕದ ಕೊನೆಯಲ್ಲಿ ಅಮೂಲ್ಯವಿಚಾರವೆಂದು ಹೇಳಿರುವ 32 ವಚನಗಳೂ ಇವೆ. ಅಂತೂ ಒಟ್ಟು 532 ವಚನಗಳಿವೆ ಈ ಪಂಚಶತಕಗಳ–ಕೊನೆಯ ಶಾಂತಿಶತಕದಲ್ಲಿ–1 ರಿಂದ 100 ರವರೆಗೆ ಸಂಖ್ಯೆಗಳನ್ನು ಹಾಕುವಾಗ, ಕೈತಪ್ಪಿನಿಂದ 53 ಮತ್ತು 69 ಈ ಎರಡು ಸಂಖ್ಯೆಗಳು ಬಿಟ್ಟುಹೋಗಿವೆ, ಹೀಗಾಗಿ 100ಕ್ಕೆ ಬದಲು 98 ವಚನಗಳು ಮಾತ್ರವಿದ್ದುವು ಈ ಎರಡು ಸಂಖ್ಯೆಗಳಿಗೂ, ನನ್ನ ಸಣ್ಣ ಭಂಡಾರದಿಂದೆರಡನ್ನು ತೆಗೆದು ಆ ಸ್ಥಳಗಳಲ್ಲಿ ಸೇರಿಸಿದ್ದೇನೆ ಅವು ಮೂಲಗ್ರಂಥದಲ್ಲಿಲ್ಲದಿದ್ದುವುಗಳೆಂದು ತೋರಿಸಲು ಅವೆರಡನ್ನೂ ಆಂಟಿಕ್ ಎಂಬ ದಪ್ಪಗೆರೆಯಕ್ಷರದಲ್ಲಿ ಮುದ್ರಿಸಿದೆ.

ಈ ಗ್ರಂಥವನ್ನು ಅನುವಾದ ಮಾಡುವುದರಲ್ಲಿ ಸಾಧ್ಯವಾದಮಟ್ಟಿಗೂ ಮೂಲಗ್ರಂಥದ ವಾಕ್ಯರಚನಾಕ್ರಮವನ್ನೇ ಅನುಸರಿಸಿದ್ದೇನೆ. ನಿರ್ವಾಹ

ವಿಲ್ಲದ ಕೆಲವು ಸಂದರ್ಭಗಳಲ್ಲಿ ಮಾತ್ರ ಅಲ್ಪಸ್ವಲ್ಪ ವ್ಯತ್ಯಾಸಮಾಡಿದ್ದೇನೆ ನನ್ನ ಅನುವಾದದಲ್ಲಿನ ಕನ್ನಡಭಾಷೆಯು ಸಾಮಾನ್ಯರಿಗೂ ಸುಲಭವಾಗಿ ಅರ್ಥವಾಗುವಂತೆ ಮಾಡಲು ಪ್ರಯತ್ನಿಸಿದ್ದೇನೆ ಅನುವಾದದಲ್ಲಿ–ಮೂಲ ಗ್ರಂಥದಲ್ಲಿ ಉಪಯೋಗಿಸಿರುವ ಹಿಂದೀ ಪದಗಳನ್ನೇ ಇಟ್ಟುಕೊಂಡು ಅವು ಗಳಿಗೆ ಆವರಣಚಿಹ್ನೆಗಳಲ್ಲಿ ವಿವರಣೆ ಕೊಟ್ಟಿರುತ್ತೇನೆ ಈ ಅಮೃತವಾಣಿಗಳು ಪಾಠಕರಿಗೆ ಅರ್ಥವಾಗಿ, ಮನಸ್ಸಿಗೆ ಗ್ರಹಣವಾಗಿ, ಅದರಿಂದವರ ಪರಿಣಾಮ ಗಳು ಶುದ್ಧಿಹೊಂದಿ ಅವರ ಜ್ಞಾನಾಭಿವೃದ್ಧಿಗೆ ಸ್ವಲ್ಪವಾಗಿಯಾದರೂ ಸಹಾಯ ವಾಗುವಂತಾದರೆ ನನ್ನ ಶ್ರಮವು ಸಾರ್ಥಕವಾದಂತೆ ಭಾವಿಸುತ್ತೇನೆ ಈ ನನ್ನ ಅನುವಾದದಲ್ಲೇನಾದರೂ ಅಸಾಮಂಜಸ್ಯಗಳು ತೋರಿಬಂದರೆ, ಸಹೃದಯರಾದ ವಾಠಕರು ದಯವಿಟ್ಟು ತಿಳಿಸಿಕೊಟ್ಟರೆ, ಮುಂದೆ ಅವುಗಳನ್ನು ಸರಿಪಡಿಸಿಕೊಳ್ಳಲು ಸಹಾಯವಾಗುತ್ತದೆ

ಈ ಅನುವಾದಕಾರ್ಯವನ್ನು ನನ್ನಿಂದ ಮಾಡಿಸಿ ನನಗೆ ದೊಡ್ಡ ಉಪ ಕಾರಮಾಡಿರುವ ಸ್ವಸ್ತಿಶ್ರೀ ೧೦೫ ಅತಿಬಲ ಮಹಾರಾಜರಿಗೆ ನಾನು ಅತ್ಯಂತ ಕೃತಜ್ಞನಾಗಿದ್ದೇನೆ.

ಈ ಗ್ರಂಥವನ್ನು ಅಂದವಾಗಿ ಮುದ್ರಿಸಿಕೊಟ್ಟ ಮೈಸೂರು ಜೈಹಿಂದ್ ಪ್ರೆಸ್ಸಿನ ಮಾಲೀಕರಾದ ಟಿ. ಸಿ ಬ್ರಹ್ಮಸೂರಯ್ಯನವರಿಗೆ ನಾನು ಆಭಾರಿ ಯಾಗಿದ್ದೇನೆ.

ಇತಿ

ಮೈಸೂರು — ಸಜ್ಜನವಿಧೇಯ

29–3–1957 — **ಎಸ್. ಬೊಮ್ಮರಸಪಂಡಿತ**

# ಪ್ರಕಾಶಕರ ಪರಿಚಯ

## (ಆದರ್ಶದಂಪತಿಗಳು)

ಈ ಗ್ರಂಥಪ್ರಕಾಶನಕಾರ್ಯವನ್ನು ಅತ್ಯಂತ ಧರ್ಮಾಸಕ್ತಿಯಿಂದ ಕೈಗೊಂಡು ನಡೆಸಿರುವ ಆದರ್ಶದಂಪತಿಗಳಾದ ಶ್ರೀ ಜಿ ಕೆ. ಡಿ ಭರಮಯ್ಯ ನವರು ಮತ್ತು ಅವರ ಧರ್ಮಪತ್ನಿ ಶ್ರೀಮತಿ ತಂಗ್ಯಮ್ಮನವರು ಈ ಉಭಯತ್ರರ ಪರಿಚಯವು ಸಮಾಜದಲ್ಲಿ ಧರ್ಮಪ್ರಭಾವನೋತ್ಸಾಹವನ್ನು ಬೆಳೆಸುವ ದೃಷ್ಟಿಯಿಂದ ಅವಶ್ಯವೆಂದು ಕಂಡುದರಿಂದ ಇಲ್ಲಿ ಅವರ ಸಂಕ್ಷಿಪ್ತ ಪರಿಚಯ ಮಾಡಿಕೊಡುವ ಪ್ರಯತ್ನಮಾಡಿರುವೆವು.

ಸೌ|| ತಂಗ್ಯಮ್ಮನವರ ಧರ್ಮಶ್ರದ್ಧೆ, ಜೈನಾಗಮದಲ್ಲಿರುವ ಆಸಕ್ತಿ, ಔದಾರ್ಯ ಮತ್ತು ಸಮತಾಭಾವ ಈ ಉದಾತ್ತಗುಣಗಳು ಕರ್ಣಾಟಕಕ್ಕೇ ಏನು ಇಡೀ ಭಾರತದಲ್ಲಿಯೇ ಜೈನಸಮಾಜಬಾಂಧವರಿಗೆ ಚಿರಪರಿಚಿತವಾಗಿರುವ ಗುಣಗಳಾಗಿರುವುವು ಇವರು ಆರಾಕನ್ಯಾಪಾಠಶಾಲಾ, ಸೋಲ್ಲಾಪುರದ ಸುಮತಿಬಾಯಿ ಆಶ್ರಮ, ವೇಣೂರು ಶ್ರೀ ಬಾಹುಬಲಿಸ್ವಾಮಿಯ ಮಹಾಮಸ್ತಕಾಭಿಷೇಕ ಪೂಜಾಕಮಿಟಿ, ಮೊದಲಾದ ಸಂಸ್ಥೆಗಳಿಗೆ ತಲಾ ಒಂದೊಂದು ಸಹಸ್ರರೂಪಾಯಿಗಳನ್ನು ಉದಾರವಾಗಿ ದಾನಮಾಡಿದುದಲ್ಲದೆ, ಶ್ರೀಕ್ಷೇತ್ರ ಸಮ್ಮೇಳದ ಶಿಖರಜಿ ಮೊದಲಾದ ತೀರ್ಥಕ್ಷೇತ್ರಗಳಲ್ಲಿ ಮುಕ್ತಹಸ್ತರಾಗಿ ದಾನಮಾಡಿಯೂ, ಮಾಡುತ್ತಲೂ ಇರುವರೆಂದು ತಿಳಿಸಲು ತುಂಬಾ ಆನಂದವಾಗುವುದು ಅಲ್ಲದೆ ಸಿರಂಜನಸ್ತುತಿ, ಹಿಂದಿಯಲ್ಲಿದ್ದ ಅಮೃತವಾಣಿ ಎಂಬ ಗ್ರಂಥದ ಕನ್ನಡಅನುವಾದ [ಮೂಡಬಿದರೆ ಪಾರ್ಶ್ವಕೀರ್ತಿವರ್ಣಜಿಯವರ ಅಭಿಪ್ರಾಯದಂತೆ ಕಾರ್ಕಳದಮಹಾಮಸ್ತಕಾಭಿಷೇಕ ಪೂಜೆಯ ಸವಿನೆನಪಿಗಾಗಿ] ಇವುಗಳ ಪ್ರಕಟಣೆಗೆ ಬೇಕಾಗುವ ಪೂರ್ತಾ ಹಣವನ್ನು ತಾವೇ ಸಲ್ಲಿಸಿರುವರು ಶ್ರೀಮತಿಯವರ ಪ್ರತಿಯೊಂದು ಧರ್ಮಕಾರ್ಯಗಳಲ್ಲಿಯೂ ಅವರ ಪತಿಯವರಾದ ಶ್ರೀ ಭರಮಯ್ಯನವರು ತೋರಿಸುತ್ತಿರುವ ಸಹಕಾರ ಮತ್ತು ಸಹಾನುಭೂತಿಗಳು ಪ್ರಶಂಸ

ನೀಯವಾಗಿರುವುದು ಆದುದರಿಂದಲೇ ಇವರ ದಾಂಪತ್ಯಜೀವನವನ್ನು ಆದರ್ಶದಾಂಪತ್ಯಜೀವನವೆನ್ನಬಹುದು

ಇವರ ಸರಳಜೀವನ, ಜೈನಪುರಾಣ ಶ್ರವಣದಲ್ಲಿರುವ ಶ್ರದ್ಧೆ, ವ್ರತಾಚರಣೆ ಮತ್ತು ದೈವಭಕ್ತಿ ಇವುಗಳಿಗೆ ಇವರು ಅನುಭವಿಸುತ್ತಿರುವ ತುಂಬು ಕುಟುಂಬ ಜೀವನವೇ ಸಾಕ್ಷಿಯಾಗಿರುವುದು ಸಾಧಾರಣವಾಗಿ ಸಂಸಾರಿ ಜೀವಿಗಳಲ್ಲಿ ಸಂಪತ್ತಿದ್ದರೆ ಸಂತತಿಯಿರುವುದಿಲ್ಲ, ಸಂತಾನವಿದ್ದರೆ ಸಂಪತ್ತಿರುವುದಿಲ್ಲ, ಇವೆರಡೂ ಇದ್ದರೆ ಇವುಗಳನ್ನು ಸಾರ್ಥಕಗೊಳಿಸುವ ಧರ್ಮಭಾವನೆ ಇರುವುದಿಲ್ಲ ಆದರೆ ಈ ದಂಪತಿಗಳಲ್ಲಿ ಐಶ್ವರ್ಯ, ಸಂತಾನ ಮತ್ತು ಧರ್ಮಭಾವನೆ ಈ ಮೂರು ಸೌಭಾಗ್ಯಗಳೂ ಏಕತ್ರ ಸೇರಿ ತ್ರಿವೇಣೀ ಸಂಗಮವಾಗಿದೆಯೆಂದರೆ ಅತಿಶಯವೆನಿಸದು.

ನಮ್ಮ ಸಮಾಜಬಾಂಧವರೆಲ್ಲರೂ ಈ ಮಾದರಿಯನ್ನನುಸರಿಸಿ ಧರ್ಮಪ್ರಭಾವನಾ ಕಾರ್ಯವನ್ನು ಕೈಗೊಂಡರ ಸಮಾಜೋದ್ಧಾರಮಾತ್ರವಲ್ಲದೆ ತಮ್ಮ ಆತ್ಮೋದ್ಧಾರವೂ ಆಗುವುದು ಆದುದರಿಂದ ಎಲ್ಲರಲ್ಲಿಯೂ ಈ ಧರ್ಮಪ್ರೇಮವು ಬೆಳೆಯಲೆಂದು ಹಾರೈಸುವೆವು ದೇವರು ಈ ದಂಪತಿಗಳಿಗೂ ಮತ್ತು ಅವರ ಕುಟುಂಬವರ್ಗದವರೆಲ್ಲರಿಗೂ ಇತೋಽಪ್ಯಾತಿಶಯವಾದ ಸಕಲ ಸನ್ಮಂಗಳಗಳನ್ನಿತ್ತು ಕಾಪಾಡಲೆಂದು ಆಶೀರ್ವದಿಸುವೆವು

ಈ "ಅಮೃತವಾಣಿ" ಗ್ರಂಥವನ್ನು ಹಿಂದಿಯಿಂದ ಕನ್ನಡಕ್ಕೆ ತರ್ಜುಮೆ ಮಾಡಿಕೊಡಬೇಕೆಂದು ಮೈಸೂರಿನ ಶ್ರೀ ಎಸ್. ಬೊಮ್ಮರಸಪಂಡಿತರಿಗೆ ನಾವು ಹೇಳಿದುದನ್ನು ಅಂಗೀಕರಿಸಿ ಕನ್ನಡಕ್ಕೆ ಅನುವಾದಿಸಿಕೊಟ್ಟಿದ್ದಾರೆ ಇದು ಧರ್ಮದಲ್ಲಿ ಅವರಿಗಿರುವ ಆಸಕ್ತಿ ಮತ್ತು ಶ್ರದ್ಧೆಯನ್ನು ವ್ಯಕ್ತಗೊಳಿಸುತ್ತದೆ ಇವರಿಗೂ ಭಗವಂತನು ಸನ್ಮಂಗಳವನ್ನುಂಟುಮಾಡಲೆಂದು ಆಶೀರ್ವದಿಸುತ್ತೇವೆ

ಸ್ವಸ್ತಿಶ್ರೀ ೧೦೫ ಅತಿಬಲಮಹಾರಾಜರು



## ತತ್ತ್ವಗಳನ್ನರಿವುದು ಅವಶ್ಯ

ತತ್ತ್ವಪ್ರೀತಿ ಮನಕ್ಕೆ ಪುಟ್ಟಲದು ಸಮ್ಯಗ್ದರ್ಶನಂ ಮತ್ತಮಾ ।
ತತ್ತ್ವಾರ್ಥಂಗಳನೊಲ್ದು ಭೇದಿಪುದು ಸಮ್ಯಗ್ಜ್ಞಾನಮಾಬೋಧದಿಂ ॥
ನತ್ತ್ವಂಗಳ್ಕಿಡದಂತುಟೋವಿ ನಡೆಯಲ್ಸಮ್ಯಕ್ಚರಿತ್ರಂ ಸುರ-
ತ್ನತ್ರಮಂ ಮೂರಿವು ಮುಕ್ತಿಗೆಂದರುಪಿದೈ ! ರತ್ನಾಕರಾಧೀಶ್ವರಾ !

## ಆತ್ಮನನ್ನರಿವಿಕೆ

ಅರಿವಿಂದೀಕ್ಷಿಸಲಕ್ಕುಮಾತ್ಮನಿರವಂ ದೇಹಂಬೊಲೀ ಕಣ್ಗೆ ತಾಂ ।
ಗುರಿಯಾಗಂ ಶಿಲೆಯೊಳ್ಸುವರ್ಣಮರಲೊಳ್ಸೌರಭ್ಯಮಾ ಕ್ಷೀರದೊಳ್ ॥
ನರುನೆಯ್ಕಾಷ್ಠದೊಳಗ್ನಿಯಿರ್ಪತೆರದಿಂದೀ ಮೆಯ್ಯೊಳೊಂದಿರ್ಪನೆಂ-
ದರಿದಭ್ಯಾಸಿಸೆ ಕಾಣ್ಗುಮೆಂದರುಪಿದೈ ! ರತ್ನಾಕರಾಧೀಶ್ವರಾ ! ॥

## ಆತ್ಮನಿರುವಿಕೆ

ಅಂಗುಷ್ಠಂಮೊದಲಾಗಿ ನೆತ್ತಿವರೆಗಂ ಸರ್ವಾಂಗ ಸಂಪೂರ್ಣನು-
ತ್ತುಂಗಜ್ಞಾನಮಯಂ ಸುದರ್ಶನಮಯಂ ಚಾರಿತ್ರತೇಜೋಮಯಂ ॥
ಮಾಂಗಲ್ಯಂ ಮಹಿಮಂ ಸ್ವಯಂಭು ಸುಖಿ ನಿರ್ಬಾಧಂ ನಿರಾಪೇಕ್ಷಿ ನಿ
ಮ್ಮಂಗಂಬೊಲ್ಪಿರವಾತ್ಮನೆಂದರುಪಿದೈ ! ರತ್ನಾಕರಾಧೀಶ್ವರಾ ! ॥

## ಆತ್ಮಸ್ವರೂಪ ಮತ್ತು ಆತ್ಮಧ್ಯಾನ ಮಾಡಬೇಕೆಂಬುದು

ಬಿಸಿಲಿಂ ಕಂದದ ಬೆಂಕಿಯಿಂ ಸುಡದ ನೀರಿಂ ನಾಂದದುಗ್ರಾಸಿ ಭೇ-
ದಿಸಲುಂ ಬಾರದ ಚಿನ್ಮಯಂ ಮರೆದು ತನ್ನೊಳ್ಪಿಂ ಪರಧ್ಯಾನದಿಂ ॥
ಪಸಿವಿಂದೀ ಬಹುಬಾಧೆಯಿಂ ರುಜೆಗಳಿಂ ಕೇಡಾಗುವೀ ಮೆಯ್ಗೆ ಸಂ-
ದಿಸಿದಂ ತನ್ನನೆ ಚಿಂತಿಸಲ್ಸುಖಿಯಲಾ! ರತ್ನಾಕರಾಧೀಶ್ವರಾ ! ॥

— 'ರತ್ನಾಕರ'

॥ ಶ್ರೀ ॥

॥ ಓಂ ನಮಸ್ಸಿದ್ಧೇಭ್ಯಃ ॥

# ಅಮೃತವಾಣಿ

## ವಚನಾಮೃತ-ಶತಕ

1. ಸಂಯಮವು (ತಪಸ್ಸು) ಕ್ರೋಧಾದಿಕಷಾಯಗಳು, ಪಂಚೇಂದ್ರಿಯಗಳು ಮತ್ತು ಮನಸ್ಸು ಇವುಗಳನ್ನು ಜಯಿಸುವುದೇ ಆಗಿದೆ. ಸಂಯಮವಿಲ್ಲದ ಜೀವನವು ಪಾಶವಿಕ (ಪಶುವಿನ) ಜೀವನವಾಗಿದೆ. ಈಗ ಯಾವುದು ಭಾವದಿಂದ ಪಶುವಾಗಿದೆಯೋ ಅದು ಮುಂದೆ ಸಾಕ್ಷಾತ್ತಾಗಿ (ನಿಜವಾದ) ಪಶುವಾಗಿಯೇ ಪರಿಣಮಿಸತಕ್ಕದ್ದಾಗುತ್ತದೆ.

2 ಅಸಂಯಮ (ತಡೆಯದೇ ಇರುವಿಕೆ) ದಿಂದ ಶರೀರ, ಧನ ಮತ್ತು ಯಶಸ್ಸು ಇವುಗಳು ನಾಶವಾಗಿ ಆತ್ಮನು ಪತನಹೊಂದುತ್ತಾನೆ (ಕೀಳುದರ್ಜೆಗೆ ಇಳಿಯುತ್ತಾನೆ). ಸಂಯಮದಿಂದ ಇದಕ್ಕೆ ವಿಪರೀತವಾದ ಫಲವುಂಟಾಗುತ್ತದೆ ಅಂದರೆ ತನು, ಧನ ಮತ್ತು ಯಶಸ್ಸು ಇವುಗಳು ವೃದ್ಧಿಯಾಗಿ ಆತ್ಮನು ಉತ್ತಮಗತಿಯನ್ನು ಹೊಂದುತ್ತಾನೆ

3 ಸಮಸ್ತಪಾಪ (ದುಃಖ) ಗಳಿಗೂ ಮೂಲವಾದುದು ಅಸಂಯಮವು; ಮತ್ತು ಸರ್ವಧರ್ಮ (ಸುಖ) ಗಳಿಗೂ ಸಂಯಮವು ಮೂಲವಾಗಿರುತ್ತದೆ

4 ಶರೀರ ರಕ್ಷಣೆಗೆ ಆಹಾರ, ಪಾನ ಮತ್ತು ಶ್ವಾಸೋಚ್ಛ್ವಾಸಗಳು ಹೇಗೆ ಅವಶ್ಯಕವಾಗಿವೆಯೋ ಹಾಗೆಯೇ ಆತ್ಮರಕ್ಷಣೆಗೆ ಸಂಯಮವು ಅವಶ್ಯಕವಾಗಿದೆ

5 ಸಂಯಮಿಯ ಜೀವನವು ಇಂದ್ರಾದಿದೇವತೆಗಳಿಂದಲೂ ಆದರಿಸ

ಲ್ಪಡತಕ್ಕುದೂ, ಪೂಜ್ಯವೂ ಆಗಿದೆ, ಮತ್ತು ಅದು ಮುಂದೆ ಮುಕ್ತಿ ಸ್ಥಾನವನ್ನು ದೊರಕಿಸತಕ್ಕುದಾಗಿದೆ.

6 ಮಾನವಜೀವನವನ್ನು ವಿಕಾಸಗೊಳಿಸುವ ಒಂದು ಕಲೆಯು ಗುಣದೃಷ್ಟಿ (ಗುಣವನ್ನು ಆದರಿಸುವ ಮನೋವೃತ್ತಿ) ಯಾಗಿದೆ

7 ಗುಣದೃಷ್ಟಿಯು ಅಹಿಂಸಾದಿ ಧರ್ಮಗಳನ್ನು ವಿಕಾಸಗೊಳಿಸತಕ್ಕು ದಾಗಿದೆ ಮತ್ತು ದೋಷದೃಷ್ಟಿಯು (ದೋಷಗಳನ್ನು ಹುಡುಕುವುದು) ಹಿಂಸಾದಿ ಪಾಪಗಳನ್ನು ವೃದ್ಧಿಗೊಳಿಸತಕ್ಕುದಾಗಿದೆ

8 ಗುಣದೃಷ್ಟಿಯ ಅಭಾವವಿದ್ದಲ್ಲಿ ದುಃಖ, ವ್ಯಾಧಿ ಮೊದಲಾದವುಗಳ ಆಕ್ರಮಣವೂ, ದೋಷದೃಷ್ಟಿಯ ಅಭಾವವಿದ್ದಲ್ಲಿ ಸುಖಸಂಪತ್ತುಗಳ ವೃದ್ಧಿಯೂ ಪ್ರಕೃತಿನಿಯಮದಿಂದ ಉಂಟಾಗುತ್ತವೆ ಫಲತಃ ಅಂದರೆ ಗುಣದೃಷ್ಟಿಯು ಆತ್ಮನನ್ನು ಪರಮಾತ್ಮಪದಕ್ಕೆ (ಮುಕ್ತಿಗೆ) ಅಭಿಮುಖವಾಗುವಂತಹ ಸತ್ಫಲ ವನ್ನುಂಟುಮಾಡುತ್ತದೆ

9. ದೋಷಿಯಾದವನನ್ನು ಗುಣಗಳ ಅನಾಥನೆಂದು (ಗುಣರಹಿತ ನೆಂದು) ತಿಳಿದು, ಬಳಿಕ ಅವನ ಗುಣಗಳನ್ನು ಕಂಡು ಅವನನ್ನು ಸನಾಥನನ್ನಾಗಿ ಮಾಡುವುದಾದರೆ ನಾವು ಅನಾಥನನ್ನು ಸನಾಥನೆಂದು ಹೇಳಿದಂತಾಗುತ್ತದೆ

10 ಮತ್ತೊಬ್ಬನ ದೋಷವನ್ನು ಹೇಳುವುದೆಂದರೆ ನಮ್ಮ ಗುಣಗಳನ್ನು ಘಾತಮಾಡಿಕೊಳ್ಳುವುದೆಂದರ್ಥವಾಗುತ್ತದೆ ತಮ್ಮಲ್ಲಿರುವ ದೋಷಗಳನ್ನು ದೂರಮಾಡಿಕೊಳ್ಳಬಲ್ಲವರಾಗುವವರೆಗೆ ಯಾರಿಗಾದರೂ ಅನ್ಯರ ದೋಷವನ್ನು ಹೇಳಲು ಯಾವ ಅಧಿಕಾರವಿದೆ ?

11 ದೋಷದೃಷ್ಟಿಯು ಹಿಂಸಕದೃಷ್ಟಿಯಾಗಿದೆ ಗುಣದೃಷ್ಟಿಯು ಅಹಿಂಸಕದೃಷ್ಟಿಯಾಗಿದೆ. ದೋಷದೃಷ್ಟಿಯನ್ನು ತ್ಯಜಿಸಿದಹೊರತು ಅಹಿಂಸಾ ಮತ್ತು ದಯಾಧರ್ಮಗಳನ್ನು ಪಾಲನೆಮಾಡಲಾಗುವುದಿಲ್ಲ

12 ಸುಖದ ಉಪಾದಾನವು ( ಮೂಲಕಾರಣ ) ಗುಣದೃಷ್ಟಿ, ಹಾಗೆಯೇ ದುಃಖದ ಮೂಲಕಾರಣವು ದೋಷದೃಷ್ಟಿಯಾಗಿದೆ

13 ಯಾರನ್ನಾದರೂ ಆಕ್ಷೇಪಿಸಿ ಅಥವಾ ದೂಷಿಸಿ ಉತ್ತಮಸ್ಥಿತಿಗೆ ತರುವ ಆಶೆಯು, ಕೆಸರಿನಿಂದ ಕೆಸರನ್ನು ತೊಳೆಯಲಪೇಕ್ಷಿಸುವಂತಾಗುತ್ತದೆ

14 ದೋಷದೃಷ್ಟಿಯಿಂದ ಈರ್ಷೆ, ದ್ವೇಷ, ವೈರ, ವಿರೋಧ, ನಿಂದೆ

ಮೊದಲಾದ ಪಾಪಮಯವಾದ ಭಾವನೆಗಳುಂಟಾಗುತ್ತವೆ

15. ಹೇಗೆ ವಿಷದಿಂದ ಪ್ರಾಣಘಾತವೂ, ಅಮೃತದಿಂದ ಅಮರತ್ವವೂ ಉಂಟಾಗುವುದೋ ಹಾಗೆಯೇ ರಾಗವೇಮೊದಲಾದ ಅಶುದ್ಧಭಾವನೆಗಳನ್ನು ಸ್ವೀಕರಿಸುವುದರಿಂದ ಆತ್ಮನಿಗೆ ಘಾತವೂ, ಶುದ್ಧಭಾವನೆಗಳಿಂದ ಅಮರತ್ವ (ನಾಶವಿಲ್ಲದಿರುವಿಕೆ) ವೂ ಉಂಟಾಗುತ್ತದೆ.

16 ಪರಪದಾರ್ಥಗಳನ್ನು (ಆತ್ಮನಿಂದ ಬೇರೆಯಾದ ಶರೀರಾದಿ ಪರಿಗ್ರಹಗಳು) ಕುರಿತು ಚಿಂತಿಸುವುದು, ಅವುಗಳನ್ನು ಸಂರಕ್ಷಿಸುವುದಕ್ಕೆ ಶ್ರಮಿಸುವುದು ಇದರಿಂದ ಕಲ್ಯಾಣಮಾರ್ಗ (ಮೋಕ್ಷಪ್ರಾಪ್ತಿಯ ದಾರಿ) ವೆಂದೂ ದೊರಕುವುದಿಲ್ಲ ಆದರೆ ಆತ್ಮನನ್ನು ಕುರಿತು ಚಿಂತಿಸುವುದು, ಪಾಪಲಿಪ್ತನಾಗದಂತೆ ರಕ್ಷಿಸುವುದು, ಇದರಿಂದ ಅವಶ್ಯವಾಗಿ ಆತ್ಮಕಲ್ಯಾಣದ ಮಾರ್ಗ ಸಿಕ್ಕುತ್ತದೆ

17. ಯಾರು ಇಂದ್ರಿಯಗಳು ಮತ್ತು ಮನಸ್ಸು ಇವುಗಳನ್ನು ವಶಪಡಿಸಿಕೊಳ್ಳುವನೋ ಅವನೇ ಮನುಷ್ಯನೆನಿಸಿಕೊಳ್ಳಲು ಯೋಗ್ಯನಾಗಿರುತ್ತಾನೆ.

18 ಇಂದ್ರಿಯಗಳಿಗೆ ವಶನಾಗಿ ಕ್ರೋಧಾದಿಕಷಾಯಗಳನ್ನು ಆದರಿಸುವುದರ ಅರ್ಥ ದುರ್ಗತಿಗೆ ಆಹ್ವಾನಕೊಟ್ಟಂತೆ.

19 ಸದಾಚಾರರೂಪವಾದ ಧನದ ಮುಂದೆ ವಜ್ರ, ವೈಡೂರ್ಯ, ಮುತ್ತು ಮೊದಲಾದವುಗಳ ಬೆಲೆಯು ಸಾಮಾನ್ಯಕಲ್ಲುಗಳ ಬೆಲೆಗಿಂತ ಹೆಚ್ಚೇನೂ ಅಗಲಾರದು. ಸದಾಚಾರವನ್ನೇ ಎಂದೂ ನಷ್ಟವಾಗದ ನಿಜವಾದ ಸಂಪತ್ತೆಂದು ತಿಳಿ

20 ರಾಜ್ಯಾಧಿಕಾರಿಗಿಂತಲೂ ಸದಾಚಾರಿಯು ಹೆಚ್ಚು ಸತ್ವಶಾಲಿಯಾಗಿರುವನು.

21 ಕ್ಷಮೆ, ಸರಳಸ್ವಭಾವ, ಸಂತೋಷ, ಸಹಿಷ್ಣುತೆ ಈ ಸದ್ಗುಣಗಳು ಕುಬೇರನ ಭಂಡಾರಕ್ಕಿಂತಲೂ ಹೆಚ್ಚುಬೆಲೆಯುಳ್ಳ ರತ್ನಗಳಾಗಿರುತ್ತವೆ

22 ದಾನಮಾಡುವುದು ಪರೋಪಕಾರಕ್ಕಾಗಿಯಲ್ಲ, ತನಗೆ ಉಪಕಾರವಾಗಲೆಂದೇ

23 ಸುವರ್ಣನಾಣ್ಯಗಳನ್ನು ಕೂಡಿಡುವುದರ ಬದಲು ಸುವರ್ಣಮಯವಾದ (ಸುಂದರವಾದ ಶಬ್ದಗಳಿಂದ ಕೂಡಿದ) ವಿಚಾರಗಳನ್ನು ಶೇಖರಿ

ಸುವುದು ಹೆಚ್ಚು ಹಿತಕರವಾಗಿದೆ

24. ಪರರನ್ನು ನಿಂದೆಮಾಡಿದ ಮಾತ್ರದಿಂದ ನಾವು ನಿಂದನೀಯರಾಗುವುದಿಲ್ಲ, ಆದರೆ ನಿಂದನೀಯವಾದ ಕಾರ್ಯಮಾಡುವುದರಿಂದ ಖಂಡಿತವಾಗಿ ನಿಂದನೀಯರಾಗುತ್ತೇವೆ

25. ಮುಕ್ತಜೀವಿಗಳನ್ನು ಸೇವಿಸಿ ಪೂಜಿಸುವುದರಿಂದ ಮಾತ್ರ ಮುಕ್ತಿ ಎಂದಿಗೂ ದೊರಕುವುದಿಲ್ಲ ಆದರೆ ಪಾಪಗಳಿಂದ (ಅಶುದ್ಧಭಾವನೆಗಳಿಂದ) ಮುಕ್ತನಾದಮೇಲೆ ಖಂಡಿತವಾಗಿ ಮುಕ್ತಿ ಸಿಕ್ಕುತ್ತದೆ

26. ಕೇವಲ ಅಶುದ್ಧಪದಾರ್ಥಗಳನ್ನು ಸೇವನೆ ಮಾಡದಿರುವುದರಿಂದಲೇ ಆತ್ಮನು ಶುದ್ಧನಾಗಲಾರನು, ಆದರೆ ಅಶುದ್ಧಭಾವನೆಗಳನ್ನು ಸೇವಿಸದಿರುವುದರಿಂದ ಖಂಡಿತವಾಗಿ ಆತ್ಮನು ಶುದ್ಧನಾಗುತ್ತಾನೆ

27. ವಂಚನೆಯಿಂದ ಸಂಪಾದಿಸಿದ ದ್ರವ್ಯವನ್ನು ಧರ್ಮಸ್ಥಾನದಲ್ಲಿನ ಧರ್ಮ ಗುರುಕಾರ್ಯಗಳಲ್ಲಿ ವಿನಿಯೋಗಿಸುವುದರ ಅರ್ಥ ಧರ್ಮ ಮತ್ತು ಗುರುಗಳನ್ನು ಕಲಂಕಿತರನ್ನಾಗಿ ಮಾಡುವುದಾಗುತ್ತದೆ ಇದರಿಂದ ತನಗೂ ಪರರಿಗೂ ಪತನವುಂಟಾಗುತ್ತದೆ.

28. ಶರೀರಸಂಬಂಧಿಯಾದ ರೋಗಗಳಿಂದ ಆತ್ಮನಿಗೆಂದೂ ಹಾನಿಯುಂಟಾಗುವುದಿಲ್ಲ. ಆದರೆ ವಿಕಾರಭಾವನೆಗಳಿಂದ ಆತ್ಮನಿಗೆ ಹಾನಿಯುಂಟಾಗೇ ಆಗುತ್ತದೆ ಆದುದರಿಂದ ಶರೀರರಕ್ಷಣೆಗಿಂತಲೂ ಹೆಚ್ಚಾಗಿ ಶುಭ ಭಾವನೆಗಳನ್ನು ರಕ್ಷಿಸಿಕೊಳ್ಳಿರಿ.

29 ಯಾವ ಪದಾರ್ಥಗಳ ಸಂಬಂಧದಿಂದ ರಾಗಾದಿಭಾವಗಳು ಉಂಟಾಗುತ್ತವೆಯೋ ಆ ಪದಾರ್ಥಗಳಮೇಲಿನ ಮಮತ್ವ (ಮೋಹಭಾವ) ವನ್ನು ಬಿಡುವುದೊಂದೇ ರಾಗಾದಿಗಳಿಂದ ಅಥವಾ ರೋಗಾದಿಗಳಿಂದ ಬಿಡುಗಡೆಯನ್ನು ಹೊಂದುವ ಉಪಾಯವಾಗಿದೆ.

30 ಸುಖದುಃಖಗಳ ಉಪಾದಾನವು (ಮೂಲಕಾರಣ) ನಮ್ಮ ಪರಿಣಾಮವೇ ಆಗಿದೆ. ಶುದ್ಧಪರಿಣಾಮದಿಂದ ಸುಖವೂ, ಅಶುದ್ಧಪರಿಣಾಮದಿಂದ ದುಃಖವೂ ಪ್ರಾಪ್ತವಾಗುತ್ತದೆ ಪರದ್ರವ್ಯಾದಿಗಳಿಂದ (ಶರೀರಾದಿ ಪರಿಗ್ರಹಗಳಿಂದ) ಸುಖದುಃಖಗಳುಂಟಾಗುತ್ತವೆಯೆಂದು ತಿಳಿಯುವುದು ಕೇವಲ ಭ್ರಾಂತಿ.

31 ಪರವಸ್ತುಗಳನ್ನು ಜೋಪಾನಮಾಡಿ ರಕ್ಷಿಸುವುದರಿಂದ ಆತ್ಮನ ಗುಣಗಳೇನೂ ರಕ್ಷಿಸಲ್ಪಡಲಾರವು. ಆದುದರಿಂದ ಪರವಸ್ತುರಕ್ಷಣೆಗಿಂತಲೂ ಅಧಿಕವಾಗಿ ಆತ್ಮಗುಣಗಳನ್ನು ರಕ್ಷಿಸಿಕೊಳ್ಳುವ ಪ್ರಯತ್ನಮಾಡುವುದೊಳ್ಳೆಯದು. (ಪರವಸ್ತುಗಳೆಂದರೆ ಆತ್ಮನಿಂದ ಭಿನ್ನವಾದ ಶರೀರಾದಿಗಳು)

32. ಸುಖದುಃಖಗಳ ಕಾರಣವು ಪರದ್ರವ್ಯ ಕ್ಷೇತ್ರ ಕಾಲಭಾವಗಳಲ್ಲ ತನ್ನ ರಾಗಾದಿ ಅಶುದ್ಧಭಾವನೆಗಳೇ ಕಾರಣವಾಗುತ್ತವೆ

33 ಪರದ್ರವ್ಯಗಳ ಸೇವನೆಯಿಂದ ಸುಖಶಾಂತಿಗಳೆಂದೂ ಲಭಿಸಲಾರವು. ಆದರೆ ಆತ್ಮಗುಣಗಳನ್ನು ಸೇವಿಸುವುದರಿಂದ ಸುಖಶಾಂತಿಗಳು ಖಂಡಿತವಾಗಿ ದೊರೆಯುತ್ತವೆ.

34. ಅಪಥ್ಯದಿಂದ ರೋಗಿಯ ರುಚಿ ಎಲ್ಲಿಯವರೆಗೆ ಇರುವುದಿಲ್ಲವೋ ಅಲ್ಲಿಯವರೆಗೆ ಔಷಧಿಗಳನ್ನು ಕುಡಿಯುವುದರಿಂದ ಆರೋಗ್ಯಪ್ರಾಪ್ತಿಯುಂಟಾಗುವುದಿಲ್ಲ. ಅದೇರೀತಿ ಎಲ್ಲಿಯವರೆಗೆ ಪಂಚೇಂದ್ರಿಯಸುಖಗಳಿಂದ ಮತ್ತು ಕ್ರೋಧಾದಿ ಕಷಾಯಗಳಿಂದ ರುಚಿ (ಅಪೇಕ್ಷೆ-ಇಚ್ಛೆ) ದೂರವಾಗುವುದಿಲ್ಲವೋ ಅಲ್ಲಿಯವರೆಗೆ ಧರ್ಮಸೇವನೆಯಿಂದ (ವ್ರತ ನಿಯಮ ತಪಸ್ಸುಗಳಿಂದ) ಮುಕ್ತಿಮಾರ್ಗಪ್ರಾಪ್ತಿಯುಂಟಾಗಲಾರದು.

35. ಸಾವಿರಾರು ಶಾಸ್ತ್ರಗಳನ್ನು ಓದುವುದಕ್ಕಿಂತಲೂ, ಲಕ್ಷಾಂತರ ದೇವ ಗುರುಗಳನ್ನು ಸೇವಿಸಿ ಪೂಜಿಸುವುದಕ್ಕಿಂತಲೂ ಒಂದು ಪವಿತ್ರಭಾವನೆಯನ್ನು ಸೇವಿಸುವುದು ವಿಶೇಷ ಉಪಯೋಗವುಳ್ಳದ್ದಾಗುತ್ತದೆ (ಆತ್ಮಹಿತಕಾರಿಯಾಗುತ್ತದೆ)

36 ಪವಿತ್ರವಿಚಾರವು ಪ್ರಭುವಿನಂತಿದೆ; ಮತ್ತು ಅಪವಿತ್ರ ವಿಚಾರವು ಪಿಶಾಚಿಗೆ ಸಮನಾಗಿರುತ್ತದೆ. ಇದರಿಂದಲೇ ಸತ್ಪುರುಷರು ತನ್ನ ಶತ್ರುಗಳ ಸಂಬಂಧದಲ್ಲಿಯೂ ಕೆಟ್ಟದ್ದನ್ನು ಹಾರೈಸದೆ ಅವರಿಗೆ ಹಿತವನ್ನುಂಟುಮಾಡುವ ಭಾವನೆಯನ್ನೇ ತಾಳಬೇಕೆಂದು ಉಪದೇಶವನ್ನು ಮಾಡುತ್ತಾರೆ

37 ಪಾಪಿಯು ಕೆಟ್ಟವನಲ್ಲ, ಆದರೆ ಪಾಪವು ಕೆಟ್ಟದ್ದು. ಪಾಪವನ್ನು ಬಿಟ್ಟಬಳಿಕ ಆ ಪಾಪಿಯ ಆತ್ಮವೇ ಧರ್ಮಾತ್ಮನೆಂದು ಹೇಳಲ್ಪಡುತ್ತದೆ.

38. ಜಡವಾದದ ಈ ಕಾಲದಲ್ಲಿ ಪ್ರಾಣಿಗಳು (ಮನುಷ್ಯರು) ಪಂಚೇಂದ್ರಿಯ ಸುಖಗಳು ಮತ್ತು ಕ್ರೋಧಾದಿ ಕಷಾಯಗಳನ್ನೇ ಪಾಣಿಗ್ರಹಣಮಾಡಿ

ಕೊಂಡಿರುತ್ತಾರೆ; ಮತ್ತು ಧರ್ಮತತ್ವದಿಂದ ದೂರರಾಗಿ ವಿಧುರನ (ಹೆಂಡತಿ ಯನ್ನು ಕಳೆದುಕೊಂಡಿರುವವನ) ಅವಸ್ಥೆಯನ್ನು ಹೊಂದಿರುವರಾಗಿರುತ್ತಾರೆ.

39 ಪಾಪಿಗಳಿಂದ ದೂರವಿರುವುದಕ್ಕಿಂತಲೂ ಹೆಚ್ಚು ಹಿತವು ಪಾಪ ಗಳಿಂದ ದೂರವಿರುವುದರಿಂದಾಗುತ್ತದೆ.

40 ಸುಖವನ್ನು ಹೊಂದುವ ಸಾಧನವು ಧನ ಅಥವಾ ಧನಿಕರನ್ನು ಸೇವಿಸುವದಲ್ಲ. ಆದರೆ ಅದು ಧರ್ಮ ಅಥವಾ ಧರ್ಮಾತ್ಮರ ಸೇವೆಯೇ ಆಗಿದೆ

41. ಗುಣವಂತರ ಸೇವೆ, ಪೂಜೆಗಳಿಂದ ಮಾತ್ರವೇ ಮನುಷ್ಯನು ಗುಣ ವಂತನಾಗಲಾರನು. ಗುಣವನ್ನು ಸೇವಿಸುವುದರಿಂದ ಅವಶ್ಯವಾಗಿ ಗುಣವಂತ ನಾಗುತ್ತಾನೆ

42. ಲಕ್ಷಾಂತರಜನ ಶತ್ರುಗಳಿಂದ ಉಂಟಾಗಲಾರದ ಹಾನಿಗಿಂತಲೂ ಅನಂತಗುಣವಾದ (ಬಹಳ ಹೆಚ್ಚಾದ) ಹಾನಿಯು ಒಂದು ಕ್ಷಣಕಾಲದ ವರೆಗೆ ಭಾವಿಸಿದ ಅಶುದ್ಧ (ಕ್ರೋಧಾದಿ) ಪರಿಣಾಮಗಳಿಂದ ಉಂಟಾಗುತ್ತದೆ

43. ಸಮತಾಭಾವವಿಲ್ಲದೆ ವ್ರತಸಂಯಮಾದಿಗಳನ್ನು ಆಚರಿಸುವುದು ಬೀಜವನ್ನು ಬಿತ್ತದೇ ಭೂಮಿಯನ್ನು ಉತ್ತು ಹದಮಾಡಿ ಬೆಳೆಯನ್ನು ಅಪೇ ಕ್ಷಿಸುವಂತಾಗುತ್ತದೆ.

44 ಶರೀರಾದಿ ಪರಪದಾರ್ಥಗಳನ್ನು ಸಂಗ್ರಹಿಸಿ ಆದರಿಸಿ ಅವುಗಳಿಂದ ಸುಖವನ್ನು ಬಯಸುವುದು ಶವದಿಂದ ಸುಖವನ್ನು ಆಶಿಮಾಡುವಂತಾಗುತ್ತದೆ

45 ಕೇವಲ ಶುದ್ಧಪದಾರ್ಥಗಳ ಸೇವನೆಯಿಂದ ಮಾತ್ರ ಆತ್ಮಶುದ್ಧಿ ಯುಂಟಾಗುವುದಿಲ್ಲ ಅದು ಶುದ್ಧಭಾವನೆಗಳನ್ನು ಸೇವಿಸುವುದರಿಂದ ಖಂಡಿತವಾಗಿ ಉಂಟಾಗುತ್ತದೆ.

46 ಅನ್ಯಾಯದಿಂದ ಹಣವನ್ನು ಸಂಪಾದಿಸಿ ದಾನಧರ್ಮಗಳನ್ನು ಮಾಡುವುದರ ಅರ್ಥ-ಕೆಸರನ್ನು ಬಳಿದು ಅದನ್ನು ತೊಳೆಯುವುದರ ಸಮನಾ ಗುತ್ತದೆಂಬುದೇ

47. ಅನ್ಯಾಯದಿಂದ ಸಂಪಾದಿಸಿದ ಹಣವನ್ನು ಧರ್ಮಕಾರ್ಯಗಳಿಗು ಪಯೋಗಿಸಿ ಸುಖವನ್ನು ಬಯಸುವುದು, ಅಪಥ್ಯಪದಾರ್ಥಗಳನ್ನು ಸೇವನೆ ಮಾಡಿ ಆರೋಗ್ಯವನ್ನು ಬಯಸಿದಂತಾಗುತ್ತದೆ

48 ವಂಚನೆ (ಅನ್ಯಾಯ) ಯಿಂದ ಸಂಪಾದಿಸಿದ ಹಣವನ್ನು ದಾನ ಮಾಡುವುದು, ಕಳ್ಳತನ ಮಾಡಿ ಶಿಕ್ಷೆ (ಸಜಾ) ಯಿಂದ ತಪ್ಪಿಸಿಕೊಳ್ಳಲು ಲಂಚಕೊಡುವಂತಾಗುತ್ತದೆ.

49 ಸೇವೆ ಮತ್ತು ವಿನಯ ಇವುಗಳು ನಿರಾಪದವಾದ ವ್ಯಾಪಾರವಾಗಿದೆ, ಅದು ಸತ್ಸಂಪಾದನೆಯ ಸಾಧನವಾಗಿದೆ.

50 ಇಚ್ಛೆಯ ಹಾನಿಯು ಸುಖವಾಗಿದೆ ಅದರ ವೃದ್ಧಿಯು ದುಃಖವಾಗುತ್ತದೆ. ಜ್ಞಾನಿಯಾದವನು ದುಃಖವನ್ನು ಆಹ್ವಾನಿಸುತ್ತಾನೆ; ಅಜ್ಞಾನಿಯಾದವನು ದುಃಖದಿಂದ ರೋಧಿಸುತ್ತಾನೆ (ವಿಹ್ವಲನಾಗುತ್ತಾನೆ)

51 ಅಜ್ಞಾನಿಜೀವನು ದುರ್ಲಭವಾದ ಇಂದ್ರಿಯಗಳನ್ನು ಅನಾವಶ್ಯಕವಾದ ಕಾರ್ಯಗಳಲ್ಲಿ ನಿಯೋಜಿಸಿ ಕರ್ಮಾಸ್ರವಕ್ಕೆ ಬಾಗಿಲು ತೆಗೆಯುತ್ತಾನೆ, ಮತ್ತು ಅಸಂಯಮ (ಸ್ವಚ್ಛಂದ) ಪ್ರವೃತ್ತಿಗೆ ವಶನಾಗಿ ದುರ್ಗತಿಗೆ ಪಾತ್ರನಾಗುತ್ತಾನೆ

52. ಪಂಚೇಂದ್ರಿಯಸಂಬಂಧಿಯಾದ ಭೋಗಸಾಮುಗ್ರಿಗಳನ್ನು ನಾವು ಕೈಕೊಳ್ಳುವುದಿಲ್ಲ. ಆದರೆ ಅವೇ ನಮ್ಮನ್ನು ಹಿಡಿದುಕೊಳ್ಳುತ್ತವೆ. ಹಾಗೆಯೇ ಪಂಚೇಂದ್ರಿಯವಿಷಯಗಳನ್ನು ಮತ್ತು ಕಷಾಯಗಳನ್ನು ನಾವು ಸ್ವೀಕರಿಸದಿದ್ದರೂ ಅವೇ ನಮ್ಮನ್ನು ಹಿಡಿದುಕೊಳ್ಳುತ್ತವೆ.

53. ಶ್ರದ್ಧಾರಹಿತವಾದ ಜ್ಞಾನವು ಯಂತ್ರಾಲಯಕ್ಕೆ ಸಮನಾಗಿರುತ್ತದೆ, ಮತ್ತು ಜ್ಞಾನರಹಿತನಾದ ಮನುಷ್ಯನು ಯಂತ್ರಸಮನಾಗಿರುತ್ತಾನೆ

54 ಶ್ರದ್ಧೆಯಲ್ಲಿ ಸಿಂಹವೃತ್ತಿ (ಸದ್ದುಮಾಡದೆ ಬಲಪೂರ್ವಕವಾಗಿ ಕೆಲಸಮಾಡುವಿಕೆ) ಇದೆ ಮತ್ತು ಬುದ್ಧಿಯಲ್ಲಿ ಶ್ವಾನವೃತ್ತಿ (ಬೊಗಳುವಿಕೆ) ಯಿದೆ.

55. ನೋಕರ್ಮ (ಪಂಚೇಂದ್ರಿಯವಿಷಯಸಾಮುಗ್ರಿ) ದೊಡನೆ ಸೇರುವುದರ ಅರ್ಥ ಕರ್ಮ (ಕಷಾಯಗಳು) ಗಳಿಗೆ ಆಹ್ವಾನಕೊಡುವುದೇ ಆಗಿದೆ.

56 ಕರ್ಮಗಳು ಆತ್ಮನೊಡನೆ ಬಲಾತ್ಕಾರವಾಗಿ ಬಂದು ಸೇರುವುದಿಲ್ಲ ಆದರೆ ಅವು ಪ್ರಲೋಭನೆಗೆ ತಕ್ಕ ಸಾಧನಸಂಯೋಗಗಳನ್ನು ಹೊಂದಿಸಿಕೊಡುತ್ತವೆ ನಿರ್ಬಲನಾದ ಆತ್ಮನು ಪ್ರಲೋಭನೆಗಳಲ್ಲಿ ಸಿಕ್ಕಿಬಿದ್ದು ಅವುಗಳಿಗೆ ಅಧೀನನಾಗಿಹೋಗುತ್ತಾನೆ ಬಲಿಷ್ಟನಾದ ಆತ್ಮನು ಪ್ರಲೋಭನೆ

ಗಳಿಗೆ ಸಿಕ್ಕಿಬೀಳದೆ ಅವಕ್ಕೆ ಕಾರಣವಾದ ಕರ್ಮಗಳನ್ನೇ ನಾಶಮಾಡಿ ಬಿಡುತ್ತಾನೆ

57 ಶತ್ರುಸೇನೆಯ ಸಾಧನಸಾಮಗ್ರಿಗಳನ್ನು ನಾಶಮಾಡಿದ ಬಳಿಕ ಶತ್ರುಸೇನೆಯು ಹೇಗೆ ನಿಲ್ಲಲಾರದೋ, ಹಾಗೆಯೇ ಕರ್ಮದ ಸಂಯೋಗಾದಿ ಶಕ್ತಿಗಳನ್ನು ನಾಶಮಾಡುವವನ ಸಮೀಪದಲ್ಲಿ ಕರ್ಮವು ನಿಲ್ಲಲಾರದು, ಮತ್ತು ಯಾರು ಮೋಹಾದಿ ಕರ್ಮಗಳನ್ನು ಸತ್ಕರಿಸುವರೋ (ಸಾಧನ ಸಾಮಗ್ರಿಗಳನ್ನು ಹೆಚ್ಚಿಸುವಿಕೆ) ಅವು ಅವನ ಮೇಲೇರದೇ ಇರುವುದಿಲ್ಲ

58. ಕರ್ಮವು ಸೇವಕ, ಆತ್ಮನು ಸ್ವಾಮಿ ಸ್ವಾಮಿಯು ಸೇವಕನಿಗಾಗಿ ಭಯಪಡಬೇಕಾದ ಆವಶ್ಯಕತೆಯೇನಿದೆ?

59 ಅಪಥ್ಯವಾದ ವಸ್ತುವನ್ನು ತಿನ್ನುವವನು ಹೇಗೆ ತನ್ನ ಸ್ವಾಸ್ಥ್ಯ (ಆರೋಗ್ಯಸ್ಥಿತಿ) ವನ್ನು ನಾಶಮಾಡಿಕೊಳ್ಳುವನೋ ಹಾಗೆಯೇ ಆರಂಭ ಪರಿಗ್ರಹಗಳನ್ನು ಹೆಚ್ಚಿಸಿಕೊಳ್ಳುವುದರಿಂದಲೂ ಮತ್ತು ವಿಷಯ ಕಷಾಯಗಳೆಂಬ ಸೇವಕರಿಂದಲೂ ಆತ್ಮನ ಸ್ವಾಸ್ಥ್ಯ (ಸಹಜಸ್ಥಿತಿ) ವು ನಷ್ಟವಾಗಿ ಹೋಗುತ್ತದೆ.

60 ಲೋಕದಲ್ಲಿ ಭಿನ್ನಸ್ಥಿತಿಯಿದ್ದರಿರಲಿ, ಆದರೆ ವಿರೋಧವನ್ನು ಮಾಡಬೇಡ ಇತರರೊಡನೆ ಜಯಕ್ಕಾಗಿ ಹೋರಾಡು, ಆದರೆ ಎಂದೂ ಈರ್ಷೆಯನ್ನು (ಹೊಟ್ಟೆಕಿಚ್ಚು) ಮಾಡಬೇಡ

61. ರಾಗಿಯಾದ (ಪ್ರಬಲವಾದ ಇಚ್ಛೆಗಳುಳ್ಳ) ಮನುಷ್ಯನ ಉಪದೇಶದಲ್ಲಿ ಸ್ವಾರ್ಥದ (ಸ್ವಪ್ರಯೋಜನದ) ಅಂಶವು ಖಂಡಿತವಾಗಿಯೂ ಇರುತ್ತದೆ, ಆದರೆ ವೀತರಾಗನಾದ (ಇಚ್ಛೆಗಳನ್ನೇ ಬಿಟ್ಟಿರುವ) ಜನನ ಉಪದೇಶವು ಪರಮಾರ್ಥೋಪದೇಶ (ಮೋಕ್ಷಪ್ರಾಪ್ತಿಯನ್ನು ಉಂಟುಮಾಡಿಕೊಡುವ ಉಪದೇಶ) ವಾಗಿದೆ

62. ಪಾಪವನ್ನು ಮಾಡಿ ಪ್ರಾಯಶ್ಚಿತ್ತ ಮಾಡಿಕೊಳ್ಳುವುದು, ಕೆಸರಿನಲ್ಲಿ ಕಾಲನ್ನು ಅದ್ದಿ ಬಳಿಕ ತೊಳೆದುಕೊಳ್ಳುವಂತಾಗುತ್ತದೆ

63. ಒಂದೇಮಾತು, ಒಂದೇತೂಕ ಎಂಬುದು ವ್ಯಾಪಾರದ ಅಭಿವೃದ್ಧಿಗೆ ಉತ್ತಮವಾದ ಸಾಧನವಾಗಿದೆ

64. ನಿಂದೆಮಾಡುವುದರಿಂದ ತನ್ನ ಶುದ್ಧವಾದ ಕಾರ್ಯವೂ ಅನ್ಯನ ಅಶುದ್ಧಕಾರ್ಯಕ್ಕೆ ಸಮಾನವಾಗಿಹೋಗುತ್ತದೆ

65 ಅನ್ಯರ ದೋಷಗಳನ್ನು ಪ್ರಕಟಮಾಡು (ಎತ್ತಿಹೇಳು) ವುದು ಎಂದರೆ, ತನಗಾಗಿ ದೋಷಗಳಿಗೂ ಮತ್ತು ದುರ್ಗತಿಗೂ ಆಹ್ವಾನಕೊಟ್ಟಂತೆಯೇ

66. ಎಷ್ಟೆಷ್ಟುಮಟ್ಟಿಗೆ ಬ್ರಹ್ಮಚರ್ಯವು ರಕ್ಷಣೆಮಾಡಲ್ಪಡುತ್ತದೆಯೋ ಅಷ್ಟಷ್ಟುಮಟ್ಟಿಗೇ ಶರೀರಸಂಬಂಧಿಯಾದ ಮತ್ತು ಆತ್ಮಸಂಬಂಧಿಯಾದ ಶಕ್ತಿಯು ವೃದ್ಧಿಹೊಂದುತ್ತಹೋಗುತ್ತದೆ.

67. ಬ್ರಹ್ಮಚರ್ಯರಕ್ಷಣೆಯು ಪಂಚೇಂದ್ರಿಯಗಳನ್ನು ಮತ್ತು ಮನಸ್ಸನ್ನು ಜಯಿಸುವುದರಿಂದ ಉಂಟಾಗುತ್ತದೆ

68. ಒಂದು ಒರೆಯಲ್ಲಿ ಎರಡು ಕತ್ತಿಗಳಿರಲಾರವು ಹಾಗೆಯೇ ಮನಸ್ಸಿನಲ್ಲಿ ಶುಭಾಶುಭಭಾವನೆಗಳೆರಡೂ ಒಟ್ಟಿಗಿರಲಾರವು

69. ನಮ್ಮ ಭವಿಷ್ಯವನ್ನು ರೂಪುಗೊಳಿಸುವ ಬ್ರಹ್ಮನು ನಮ್ಮ ಭಾವನೆ (ಪರಿಣಾಮ) ಗಳೇ ಆಗಿವೆ

70 ತ್ಯಾಗಿ, ಯೋಗಿ, ಯತಿ, ಪತಿವ್ರತೆ, ವೇಶ್ಯೆ, ಪರಮಾರ್ಥಿ ಮತ್ತು ಕಷಾಯಿ. ಇವರುಗಳೆಲ್ಲರೂ ತಮ್ಮ ತಮ್ಮ ಮನಸ್ಸಿನ ವಿಚಾರ (ಪರಿಣಾಮ) ಗಳಿಂದಲೇ ಹಾಗಾಗಿದ್ದಾರೆ ಮತ್ತು ಆಗುತ್ತಿದ್ದಾರೆ ಈ ಲೋಕದಲ್ಲಿ ಇಂತಹ ಅನೇಕಾನೇಕ ಭೇದಗಳು ಕಂಡುಬರುತ್ತಲೇ ಇವೆ ಅವೆಲ್ಲವೂ ಜೀವಿಗಳ ಭಿನ್ನಭಿನ್ನವಾದ ಪರಿಣಾಮಗಳಿಂದಲೇ ಉಂಟಾಗಿವೆ, ಮತ್ತು ಉಂಟಾಗುತ್ತಿರುತ್ತವೆ.

71 ಮನಸ್ಸಿನಲ್ಲಿ ಉಂಟಾಗುವ ಪರಿಣಾಮವನ್ನು ಮಾತುಗಳ ಮೂಲಕ ವ್ಯಕ್ತಪಡಿಸಲಿ ಅಥವಾ ಬಿಡಲಿ, ಅವುಗಳ ಪ್ರಭಾವವಂತೂ ತನ್ನ ಅಥವಾ ಇತರರಮೇಲೆ ಉಂಟಾಗೇ ಆಗುತ್ತದೆ ಕೆರೆಯ ಸಮೀಪದಲ್ಲಿ ಶೀತ ಪರಮಾಣುಗಳೂ, ಉರಿಯುತ್ತಿರುವ ಒಲೆಯ ಸಮೀಪದಲ್ಲಿ ಉಷ್ಣಪರಮಾಣುಗಳು ಇದ್ದೇಯಿರುತ್ತವೆ. ಹಾಗೆಯೇ ಶುಭಪರಿಣಾಮವುಳ್ಳವನ ಬಳಿಯಲ್ಲಿ ಶುಭಪರಮಾಣುಗಳೂ, ಅಶುಭಪರಿಣಾಮವುಳ್ಳವನ ಬಳಿ ಅಶುಭಪರಮಾಣುಗಳೂ ವ್ಯಾಪಿಸಿದ್ದೇಯಿರುತ್ತವೆ ತಾಯಿ ಮತ್ತು ವೇಶ್ಯೆ ಇವರಿಬ್ಬರಲ್ಲಿ ಬೇರೆ ಬೇರೆ ಪ್ರಕಾರವಾದ ಪರಮಾಣುಗಳು ಸುತ್ತಿಕೊಂಡಿರುತ್ತವೆ (ಪತಿವ್ರತೆ ಮತ್ತು ವೇಶ್ಯೆ ಇಬ್ಬರೂ ಸ್ತ್ರೀಯರೇ, ಆದರೂ ಅವರವರ ಶುಭಾಶುಭ

ಪರಿಣಾಮಗಳಿಂದ ಒಬ್ಬಳು ಶೀಲವತಿಯಾಗಿಯೂ, ಇನ್ನೊಬ್ಬಳು ವ್ಯಭಿಚಾರಿಣಿಯಾಗಿಯೂ ಆಗುತ್ತಾರೆ)

72 ಜೀವಿಗಳು ತಮ್ಮ ತಮ್ಮ ಪರಿಣಾಮಗಳಿಗೆ ಅನುಸಾರವಾಗಿ ತಮ್ಮ ತಮ್ಮ ಭವಿಷ್ಯವನ್ನು ನಿರ್ಮಿಸಿಕೊಳ್ಳುತ್ತವೆ ನಮ್ಮ ಭವಿಷ್ಯವನ್ನು ಸೃಷ್ಟಿಸಿಕೊಳ್ಳುವ ಬ್ರಹ್ಮನು ನಾವೇ ಆಗಿದ್ದೇವೆ

73 ನಿಂದಕನ (ದೂಷಿಸುವವನ) ಮಾತುಗಳನ್ನು ಕೇಳಿ ಸಂತಾಪ ಪಡುವುದು, ಟೆಲಿಫೋನಿನಲ್ಲಿ ಅಶುಭಸಮಾಚಾರವನ್ನು ಕೇಳಿ ಅದನ್ನು ಒಡೆದು ಹಾಕಿದಂತಾಗುತ್ತದೆ.

74. ವ್ಯಭಿಚಾರಿಯಾದ ಮನುಷ್ಯನನ್ನು ಪಶುವೆಂದು ಹೇಳುವುದು ಪಶುವಿಗೆ ಅವಮಾನಮಾಡಿದಂತಾಗುತ್ತದೆ. ಏಕೆಂದರೆ, ಪಶುವು ತನ್ನ ಪ್ರಕೃತಿಗೆ ಅನುಕೂಲವಾದ ಸಂಯಮವನ್ನು ಕಾಪಾಡಿಕೊಳ್ಳುತ್ತದೆ.

75 ಶರೀರಾದಿ ಭಿನ್ನಪದಾರ್ಥಗಳಿಂದ ತನಗೆ ಸುಖವುಂಟಾಗುವುದೆಂದು ತಿಳಿಯುವುದು ಕೇವಲ ಕಲ್ಪನೆಮಾತ್ರ

76 ನಮ್ಮ ನಿಜವಾದ ಭೋಜನ, ವಸ್ತ್ರ, ಅಲಂಕಾರ ಅಥವಾ ವ್ಯಾಪಾರ ಇವೆಲ್ಲವೂ ಸಮತಾಭಾವ (ರತ್ನತ್ರಯಭಾವ) ವಾಗಿವೆ.

77. ಅಂತರಂಗನೈರ್ಮಲ್ಯವಿಲ್ಲದೆ (ಮನಶುದ್ಧಿಯಿಲ್ಲದೆ) ಮಾಡುವ ಪ್ರಯಾಸವು (ಜಪ, ತಪ, ಧ್ಯಾನಾದಿಗಳ ಆಚರಣೆ) ನೀರನ್ನು ಕುದಿಸಿ ತುಪ್ಪವನ್ನು ತೆಗೆಯುವ ಪ್ರಯತ್ನದಂತಾಗುತ್ತದೆ

78 ಪಂಚೇಂದ್ರಿಯಗಳನ್ನು ಮತ್ತು ಕ್ರೋಧಾದಿ ಕಷಾಯಗಳನ್ನು ಜಯಿಸುವುದೇ ತಪಸ್ಸು

79 ತನ್ನ ಗುಣಗಳನ್ನು ಹಾಗೆಯೇ ಅನ್ಯರ ದೋಷಗಳನ್ನು ಪ್ರಕಟವಾಗಿ ಹೇಳುವುದು ಅಸತ್ಯವಚನ (ಸುಳ್ಳುಹೇಳುವಿಕೆ) ವಾಗಿದೆ

80 ಶತ್ರುವೂ ಸುಖವಾಗಿರುವುದನ್ನು ನೋಡಬೇಕೆಂಬ ಭಾವನೆಯೂ ಅಥವಾ ಶತ್ರುವಿಗೂ ಹಿತವನ್ನುಂಟುಮಾಡುವ ಪ್ರಯತ್ನವೂ ಮನುಷ್ಯತ್ವವಾಗಿದೆ ಈ ಭಾವನೆ ಎಷ್ಟು ಕಮ್ಮಿಯಾಗಿರುತ್ತದೆಯೋ ಅಷ್ಟೇ ಮನುಷ್ಯತ್ವವೂ ಕಮ್ಮಿಯಾಗಿರುತ್ತದೆಯೆಂದು ತಿಳಿಯಬೇಕು

81 ಅಜ್ಞಾನಿಯು ಲೋಕವನ್ನು ದಯಾಪಾತ್ರವೆಂದು (ಉಪಕಾರಕ್ಕೆ

ಯೋಗ್ಯವೆಂದು) ತಿಳಿದು ಅದಕ್ಕೆ ಚಿಕಿತ್ಸೆ (ಹಿತವನ್ನುಂಟುಮಾಡು) ಮಾಡ.ವು ದಕ್ಕೆ ಪ್ರಯತ್ನಿಸುತ್ತಾನೆ ಆದರೆ ತನಗಾಗಿ ಚಿಕಿತ್ಸೆಮಾಡಿಕೊಳ್ಳುವ ವಿಚಾರ ವನ್ನೇ ಮಾಡುವುದಿಲ್ಲ.

82. ಜನರು ಪರಿಗ್ರಹದಲ್ಲಿ (ಕಳತ್ರಬಂಧುಮಿತ್ರಧನಧಾನ್ಯಾದಿಗಳಲ್ಲಿ) ಮತ್ತು ಪಂಚೇಂದ್ರಿಯಸುಖಗಳಲ್ಲಿ ರುಚಿ (ಇಚ್ಛೆ), ಪ್ರೀತಿ ಮತ್ತು (ರಕ್ಷಣೆ ಮಾಡುವ) ಪ್ರವೃತ್ತಿಯುಳ್ಳವರಾಗಿ ಅವುಗಳಿಂದ ಸುಖವನ್ನು ಆಪೇಕ್ಷಿಸು ತ್ತಾರೆ ಅವರ ಈ ಆಪೇಕ್ಷೆಯು ಅಪಥ್ಯವಾದ (ಆರೋಗ್ಯಕ್ಕೆ ಹಾನಿಯನ್ನುಂ ಟುಮಾಡುವ) ಪದಾರ್ಥವನ್ನು ಸೇವನೆಮಾಡುತ್ತಾ ಸ್ವಾಸ್ಥ್ಯ (ಆರೋಗ್ಯಸ್ಥಿತಿ) ವನ್ನು ಬಯಸುವಂತಾಗುತ್ತದೆ

83. ಯಾವನು ಲೌಕಿಕನಿಮಿತ್ತಗಳಿಂದಾವೃತನಾಗಿದ್ದರೂ, ಈರ್ಷೆ ವಿಷಾದಗಳ ಸಿಕ್ಕಿನಿಂದ ತನ್ನನ್ನು ಉಳಿಸಿಕೊಳ್ಳುವನೋ ಅವನೇ ಸುಖಪಡುವ ಅಧಿಕಾರವುಳ್ಳವನಾಗುತ್ತಾನೆ.

84 ಆತ್ಮಬೋಧ (ಆತ್ಮಜ್ಞಾನ) ವಿಲ್ಲದ ಹೊರತು ಲೌಕಿಕವಾದ ಪ್ರಭುತ್ವದಿಂದಲೂ ಯಾರೂ ಸುಖಿಗಳಾಗಲಾರರು

85. ಸದ್ಗುಣರೂಪವಾದ ನಿಜವಾದ ಸಂಪತ್ತನ್ನು ನಿಮ್ಮ ಹೃದಯದ ಭಂಡಾರದಲ್ಲಿ ತುಂಬಿಟ್ಟುಕೊಳ್ಳಿರಿ ಈ ಧನವು (ಸಂಪತ್ತು) ಎಂದೂ ನಷ್ಟ ವಾಗುವುದಿಲ್ಲ ಈ ಸ್ವಸಂಪತ್ತನ್ನು ಹೃದಯರೂಪವಾದ ಬ್ಯಾಂಕಿನಲ್ಲಿಟ್ಟಿದ್ದರೆ, ಎಲ್ಲಕ್ಕಿಂತಲೂ ಅಧಿಕವಾದ ಬಡ್ಡಿ (ಪ್ರತಿಫಲ) ಯೂ ಸಿಕ್ಕುತ್ತದೆ ಕ್ಷಮೆ, ಶೀಲ, ಸಂತೋಷ, ನಿರಭಿಮಾನತೆ, ಸರಳ ಸ್ವಭಾವ ಮತ್ತು ಸಹಿಷ್ಣುತೆ ಮೊದ ಲಾದ ಸದ್ಗುಣರತ್ನಗಳು ಕುಬೇರನ ಭಂಡಾರಕ್ಕಿಂತಲೂ ಅಧಿಕಬೆಲೆಯುಳ್ಳ ವುಗಳಾಗಿವೆ

86 ಹೇಗೆ ಚಿನ್ನ ಮತ್ತು ವಜ್ರ ವೈಡೂರ್ಯಾದಿ ರತ್ನಗಳು ದೋಷ ವುಳ್ಳವುಗಳಾದರೆ, ಅವುಗಳ ಬೆಲೆಯು ಕಮ್ಮಿಯಾಗಿಹೋಗುತ್ತದೆಯೋ ಹಾಗೆಯೇ ದೋಷಯುಕ್ತನಾಗುವುದರಿಂದ ಆತ್ಮನ ಬೆಲೆಯೂ ಕಡಮೆಯಾ ಗುತ್ತದೆ; ಅಂದರೆ ಆತ್ಮನು ನಿಂದನೀಯ (ದೂಷಣೆಗೆ ಯೋಗ್ಯ) ನಾಗುತ್ತಾನೆ, ಮತ್ತು ದೋಷರಹಿತನಾಗ-ವುದರಿಂದ, ವಂದನೀಯ (ಆದರ ಸತ್ಕಾರಗಳಿಗೆ ಯೋಗ್ಯ) ನಾಗುತ್ತಾನೆ. ಆತ್ಮನಿಗೆ ಉಂಟಾಗುವ ದೋಷಗಳೆಂದರೆ–ಅಜ್ಞಾನ

ಮತ್ತು ಕ್ರೋಧಾದಿ ಕಷಾಯಭಾವಗಳು ಈ ದೋಷಗಳು ಹೇಗೆ ಹೇಗೆ ಜಯಿಸಲ್ಪಟ್ಟು ಕಷ್ಟಿಯಾಗಿಹೋಗುತ್ತವೆಯೋ ಹಾಗೆ ಹಾಗೆಯೇ ಆತ್ಮನು ಉನ್ನತಸ್ಥಾನವನ್ನು ಹೊಂದುತ್ತಾ ಹೋಗುತ್ತಾನೆ

87 ಮನುಷ್ಯನ ಅತ್ಯುತ್ತಮವಾದ ಗುಣಗಳೆಂದರೆ—ಸದಾಚಾರ ಮತ್ತು ವಿಶ್ವಾಸಪಾತ್ರತೆ (ನಂಬಿಕೆಗೆ ಯೋಗ್ಯನಾಗಿರುವುದು)

88 ಮನುಷ್ಯಜನ್ಮವನ್ನು ಸದುಪಯೋಗಪಡಿಸಿಕೊಳ್ಳುವುದಾದರೆ (ಆತ್ಮಜ್ಞಾನದಿಂದ ಆತ್ಮನಲ್ಲಿ ಲೀನವಾಗಿ ಆತ್ಮಾನಂದವನ್ನು ಪಡೆಯುವುದಾದರೆ) ಅವನು ಹೊಂದಬಲ್ಲವನಾಗುವ ಸುಖವು ದೇವತೆಗಳಿಗೂ ದೊರೆಯುವುದಿಲ್ಲ

89 ಯಾವನು ಆತ್ಮೋದ್ಧಾರದಲ್ಲಿ ಯತ್ನಶೀಲನಾಗಿರುವನೋ ಮತ್ತು ಶಾಂತಿಮಾರ್ಗವನ್ನು ಅವಹೇಳನ (ಅಲ್ಲಗಳೆಯುವಿಕೆ) ಮಾಡದಿರುವನೋ ಅವನೇ ಮನುಷ್ಯನೆನಿಸಿಕೊಳ್ಳಲು ಯೋಗ್ಯನಾಗಿರುವವನು

90. ಯಾವ ಮನುಷ್ಯನು ತನ್ನ ಪ್ರವೃತ್ತಿಯನ್ನು ನಿರ್ಮಲವಾಗಿಟ್ಟುಕೊಳ್ಳುವನೋ ಅವನು ನಿಜವಾಗಿ ಆದರಣೀಯನಾಗುತ್ತಾನೆ

91 ವಿಷಯಸುಖಗಳನ್ನು ಹುಲ್ಲಿಗಿಂತಲೂ ತುಚ್ಛವಾಗಿ ಭಾವಿಸುವುದರಲ್ಲಿಯೇ ಆತ್ಮಗೌರವವಿರುತ್ತದೆ ನಿರೋಗಿಯಾಗಿದ್ದರೂ ಆತ್ಮಕಲ್ಯಾಣದಿಂದ ವಿಮುಖನಾಗಿರುವ ಮನುಷ್ಯನು ಮನುಷ್ಯನೇ ಅಲ್ಲ

92 ಮನುಷ್ಯತ್ವವು ಒಂದು ವಿಶೇಷವಾದ ಗುಣ, ಅದಿಲ್ಲದ ವಿನಾ ಮನುಷ್ಯನು ಮನುಷ್ಯನೆಂದೆನಿಸಿಕೊಳ್ಳಲಾರನು. ಯಾವ ವ್ಯವಹಾರದಿಂದ ಅನ್ಯರಿಗೆ ದುಃಖವುಂಟಾಗುವುದಿಲ್ಲವೋ, ಅಹಿತ (ಕೇಡು) ವುಂಟಾಗುವುದಿಲ್ಲವೋ, ಯಾವ ವ್ಯವಹಾರದಿಂದ ಅನ್ಯನನ್ನು ನೋಡಿದೊಡನೆಯೇ ಮನಸ್ಸಿನಲ್ಲಿ ಕ್ರೋಧಭಾವ ಜಾಗೃತವಾಗುವುದಿಲ್ಲವೋ ಅಂತಹ ವ್ಯಾಪಾರದ ಹೆಸರೇ ಮನುಷ್ಯತ್ವವೆಂದು

93 ಯಾವನು ತನ್ನ ಪ್ರತಿಜ್ಞೆಯನ್ನು ಪಾಲಿಸುವನೋ (ಭಾಷೆ ಕೊಟ್ಟಂತೆ ನಡೆಯುವನೋ) ಮತ್ತು ಎಲ್ಲಾ ವಸ್ತುಗಳಲ್ಲಿಯೂ ಮಮತ್ವ (ನನ್ನದೆಂಬ ಮೋಹ) ವನ್ನು ತ್ಯಾಗಮಾಡಿ (ಬಿಟ್ಟು) ತನ್ನ ಭವಿಷ್ಯವನ್ನು ನಿರ್ಮಲಮಾಡಿಕೊಳ್ಳುವನೋ ಅವನೇ ಮನುಷ್ಯನೆನಿಸಿಕೊಳ್ಳುವವನು.

94 ಸಂಸಾರವು ಸ್ನೇಹಮಯ (ಸ್ನೇಹಾಪೇಕ್ಷಿ) ವಾಗಿದೆ. ಯಾವನು ಈ ಸ್ನೇಹದಮೇಲೆ ಜಯವನ್ನು ಪಡೆಯುವನೋ ಅವನೇ ಮನುಷ್ಯನು

95. ತನ್ನ ಸಮಯ (ಕಾಲ) ವನ್ನು ತನ್ನ ಸಮಯ (ಧರ್ಮಾನುಷ್ಠಾನ) ದಲ್ಲಿ ನಿಯೋಜಿಸುವುದು ಮನುಷ್ಯಜನ್ಮದ ಕರ್ತವ್ಯ ಮತ್ತು ಸುಖ ಪ್ರಾಪ್ತಿಗೆ ಕಾರಣವಾಗಿದೆ

96 ಮನುಷ್ಯಜನ್ಮದಲ್ಲಿ ಮಾತ್ರ ಆತ್ಮಜ್ಞಾನವುಂಟಾಗುತ್ತದೆಯೆನ್ನುವುದು ಸರಿಯಲ್ಲ ನಾಲ್ಕು ಗತಿ (ದೇವ ಮನುಷ್ಯ, ತಿರ್ಯಂಚ ಮತ್ತು ನಾರಕ) ಗಳಲ್ಲಿಯೂ ಆತ್ಮಜ್ಞಾನವುಂಟಾಗಬಲ್ಲುದು ಆದರೆ ಸಂಯಮ ಪಾತ್ರತ್ವ (ತಪಶ್ಚರಣಕ್ಕೆ ಯೋಗ್ಯವಾದ ಸ್ಥಿತಿ) ವುಳ್ಳದು ಮನುಷ್ಯಜನ್ಮ ಮಾತ್ರ ಶರೀರಾದಿ ಪರಪದಾರ್ಥಗಳ ಸಂಬಂಧವಾದ ಮಮತ್ವ (ನನ್ನದೆಂಬ ಮೋಹ) ವು ಬಿಡಲ್ಪಟ್ಟಾಗ ಮಾತ್ರ ಈ ಮನುಷ್ಯಜನ್ಮದಿಂದ ಲಾಭ.

97 ಮನುಷ್ಯನು ತನ್ನ ಲಕ್ಷ್ಯ (ಜೀವನದ ಗುರಿ) ವನ್ನು ಸ್ಥಿರಪಡಿಸಿಕೊಂಡು, ಆದಕ್ಕೆ ಅನುಕೂಲವಾದ ಪ್ರವೃತ್ತಿಯುಳ್ಳವನಾಗಿ ನಡೆಯುವುದೇ ಮನುಷ್ಯನಿಗೆ ಉಚಿತವಾಗಿದೆ. ಇಲ್ಲಿ ಲಕ್ಷ್ಯವೆಂದರೆ ತನ್ನ ಆಚರಣೆಯ ಮೂಲಕವಾಗಿ ಅನ್ಯರು ತೊಂದರೆಗೆ ಗುರಿಯಾಗದಂತೆ ನೋಡಿಕೊಳ್ಳುವುದೆಂದು ತಿಳಿಯಬೇಕು

98. ಮನುಷ್ಯಜಾತಿಯು ಎಲ್ಲಕ್ಕಿಂತಲೂ ಉತ್ತಮವಾದುದಾಗಿದೆ. ಈ ಉತ್ತಮತ್ವವನ್ನು ದುರುಪಯೋಗಪಡಿಸುತ್ತಾ ಎಂದೂ ಲೋಕಕಂಟಕರಾಗಬೇಡಿರಿ, ಮತ್ತು ತಿರ್ಯಂಚಾದಿ ಇತರಜಾತಿಯ ಪ್ರಾಣಿಗಳಿಗೆ ಕಷ್ಟವನ್ನುಂಟುಮಾಡುತ್ತಾ ಮಾನವನನ್ನು ದಾನವನೆಂದು ಹೇಳಬಹುದಾದ ಅವಕಾಶವನ್ನುಂಟುಮಾಡಿಕೊಡಬೇಡಿರಿ

99 ಚಿಂತೆಯೊಂದೇ ಆತ್ಮಗುಣಗಳನ್ನು ನಿರೋಧ (ಅಡ್ಡಿಮಾಡು) ಮಾಡತಕ್ಕುದಾಗಿದೆ ಆದುದರಿಂದ ಅದನ್ನು ಶಾಂತಗೊಳಿಸುವುದೇ ಉತ್ತಮವಾಗಿದೆ.

100 ತ್ಯಾಗವೈರಾಗ್ಯಗಳಿಲ್ಲದ ಜ್ಞಾನವು ಎಷ್ಟಾದರೂ ಇರಲಿ, ಅದು ಮೋಕ್ಷಪ್ರಾಪ್ತಿಗೆಂದೂ ಕಾರಣವಾಗುವುದಿಲ್ಲ.

# ಉಪದೇಶ-ಶತಕ

1 ನಿರ್ಬಲನಿಗೆ ಪಂಚೇಂದ್ರಿಯಗಳು ಮತ್ತು ಕ್ರೋಧಾದಿ ಕಷಾಯ ಗಳು ಆಯುಧಗಳಾಗಿವೆ.

2 ಬಲವಂತನ ಆಯುಧಗಳು ಸಂಯಮ (ಮನೋನಿಗ್ರಹ) ಮತ್ತು ಸಮತಾಭಾವ.

3. ವಿಚಾರವು ವಾಯುಮಾತ್ರವಾಗಿದೆ ವ್ಯವಹಾರವು ಚೈತನ್ಯರೂಪ ವಾಗಿದೆ

4 ಆತ್ಮವಾದಿಯು (ಆತ್ಮನೇ ದೊಡ್ಡವನೆಂದು ತಿಳಿಯುವವನು) ಮೂರುಲೋಕಗಳ ವಿಭೂತಿಗೂ (ಸಂಪತ್ತು-ವೈಭವ) ಸ್ವಾಮಿಯಾಗಿದ್ದಾನೆ

5 ಶರೀರವಾದಿಯು (ಶರೀರವೇ ಹೆಚ್ಚೆಂದು ತಿಳಿಯುವವನು) ಶರೀರದ ಪದ (ಸ್ಥಿತಿ) ದಲ್ಲಿ ಕುರುಡನಾಗಿ (ಶರೀರದ ಕ್ಷಣಭಂಗುರತ್ವವನ್ನು ನೋಡಿಯೂ ತಿಳಿಯಲಾರದವನಾಗಿ) ಆತ್ಮತತ್ವ ಮತ್ತು ಧರ್ಮಾಚರಣೆ ಗಳನ್ನು ಮರೆತುಬಿಡುತ್ತಾನೆ

6 ಆತ್ಮವಾದಿಯು ಆತ್ಮಾನಂದವೆಂಬ ಮತ್ತಿನಿಂದ ಆವರಿಸಲ್ಪಟ್ಟವ ನಾಗಿ ಇಂದ್ರ ಮತ್ತು ಚಕ್ರವರ್ತಿಗಳ ಭೋಗವನ್ನೂ ರೋಗವೆಂದು ತಿಳಿ ಯುತ್ತಾನೆ

7 ಶರೀರಮದಕ್ಕಿಂತಲೂ ಆತ್ಮಮದವು ಅನಂತಶಕ್ತಿಯುಳ್ಳದಾಗಿದೆ.

8 ಶರೀರಮದಾಂಧನು ಧರ್ಮತತ್ವವನ್ನು ಮರೆಯುವುದಾದರೆ, ಆತ್ಮಮದಾಂಧನು ಶಾರೀರಕ (ಶರೀರಸಂಬಂಧವಾದ) ಸುಖವನ್ನು ದುಃಖ ವೆಂದು ತಿಳಿಯಬಾರದೇಕೆ?

9 ಜ್ಞಾನಿಯು ಸಾಗರದಂತೆ ಗಂಭೀರನಾಗಿರುತ್ತಾನೆ

10 ತನ್ನನ್ನು ತಾನು ತಿಳಿಯದವನು ಜ್ಞಾನಿಯೋ ಅಥವಾ ಅಜ್ಞಾ ನಿಯೋ? ಜಡನೋ ಅಥವಾ ಚೈತನ್ಯನೋ?

11. ಹಂಸೆಯ ಆಹಾರವನ್ನು ಬಕುಳದ ಹಕ್ಕಿಯು (ಕೊಕ್ಕರೆ) ಜೀರ್ಣಿಸಿಕೊಳ್ಳಲಾರದು ಹಾಗೆಯೇ ಜ್ಞಾನಿಯ ಜ್ಞಾನಮಯ (ಜ್ಞಾನ ಸ್ವರೂಪವನ್ನು ತಿಳಿಸುವ) ವಚನಗಳನ್ನು ಜ್ಞಾನಿಮಾತ್ರ ತಿಳಿಯುವನು

12 ಆತ್ಮಜ್ಞಾನವುಳ್ಳವನು ಸಂಸಾರವನ್ನು ಮಾಯೆಯೆಂದು ತಿಳಿದು, ಆತ್ಮನಲ್ಲಿ ಲೀನನಾಗಿರುತ್ತಾನೆ ಇದು ಶಾಶ್ವತವಾದ ನಿಯಮವಾಗಿದೆ.

13 ಅಜ್ಞಾನಿಯ ಮನಸ್ಸು ಹಗಲು ರಾತ್ರಿ ಬೊಗಳುತ್ತಿರುವ ನಾಯಿ ಯಂತಿರುತ್ತದೆ ಜ್ಞಾನಿಯ ಮನಸ್ಸಾದರೋ ಸಿಂಹದಂತೆ ಶಾಂತವಾಗಿಯೂ, ಗಂಭೀರವಾಗಿಯೂ ಇರುತ್ತದೆ

14. ಉಪಾಧ್ಯಾಯನ ಚಪಲತೆ (ಅಸ್ಥಿರಬುದ್ಧಿ) ಯು ವಿದ್ಯಾರ್ಥಿ ಗಳನ್ನು ಮೂರ್ಖರನ್ನಾಗಿ ಮಾಡುತ್ತದೆ, ಅದೇರೀತಿ ಧರ್ಮಗುರುವಿನ ಚಪ ಲತೆಯು ಭಕ್ತರನ್ನು ಕೆಳಕ್ಕೆ ಬೀಳಿಸುತ್ತದೆ (ಭಕ್ತಿಭ್ರಷ್ಟರನ್ನಾಗಿ ಮಾಡುತ್ತದೆ).

15. ಸಂಸಾರವು ಅನಂತಕಾಲವಿರುವ ಕಾರಾಗೃಹವಾಗಿದೆ ಸಂಸಾರಿ ಜೀವನು ಅನಂತಕಾಲದವರೆಗಿನ ಬಂದಿ (ಕಾರಾಗೃಹವಾಸಿ) ಯಾಗಿದ್ದಾನೆ

16 ಅನಂತಕಾಲದಿಂದಲೂ ಬಂಧಿಸಲ್ಪಟ್ಟಿರುವ ಸಂಸಾರವೆಂಬ ಕಾರಾ ಗೃಹವನ್ನೇ ಸಂಸಾರಿಜೀವನು ಅರಮನೆಯೆಂದು ತಿಳಿದುಕೊಂಡಿರುತ್ತಾನೆ.

17 ಸಂಸಾರಿಜೀವನು ತನ್ನ ಸಂಸಾರಬಂಧನವನ್ನೇ ಮುಕ್ತಿಯೆಂದು ತಿಳಿದುಕೊಂಡಿರುತ್ತಾನೆ.

18 ಮನುಷ್ಯನು ಸ್ತ್ರೀ, ಪುತ್ರ, ಗೃಹ ಮೊದಲಾದವರ ಬಂಧನದಿಂದ ಬಂದೀಗೃಹವನ್ನೇ ನಿರ್ಮಿಸಿಕೊಂಡಿದ್ದಾನೆ ಮತ್ತು ವಿಶೇಷವಾಗಿ ನಿರ್ಮಿಸುತ್ತಾ ಹೋಗುತ್ತಾನೆ

19 ರಾಜ್ಯಾಧಿಕಾರ ಮತ್ತು ಸ್ತ್ರೀಯರನ್ನು ತ್ಯಜಿಸುವುದು ಸುಲಭ ವಲ್ಲ. ಮಾನ, ಸತ್ಕಾರ, ಸನ್ಮಾನ, ಪೂಜೆ ಮೊದಲಾದವುಗಳನ್ನು ತ್ಯಾಗಮಾ ಡುವುದು ಕಷ್ಟವಾದುದು. ಇದೇ ಭವಭ್ರಮಣದ ಮೂಲವಾಗಿದೆ.

20. ಯಾರಿಗೆ ಜ್ಞಾನವೆಂಬ ಕಣ್ಣಿಲ್ಲವೋ ಅವನು ಸ್ವರ್ಗ, ನರಕ, ಪುಣ್ಯ, ಪಾಪ, ಬಂಧ ಅಥವಾ ಮೋಕ್ಷ ಇವುಗಳನ್ನೆಂದೂ ನೋಡಲಾರನು

21. ಚರ್ಮಚಕ್ಷುವುಳ್ಳವನು (ಸಾಮಾನ್ಯ ಕಣ್ಣುಳ್ಳವನು) ಸ್ತ್ರೀ, ಪುತ್ರ, ಧನಗಳನ್ನೇ ಮೋಕ್ಷವೆಂದು ತಿಳಿಯುತ್ತಾನೆ, ಮತ್ತು ಅವುಗಳಲ್ಲೇ ಲೀನನಾಗುತ್ತಾನೆ.

22 ಐಶ್ವರ್ಯದಮೇಲೆ ಮಮತೆಯಿಡುವುದು (ಅತಿಯಾಗಿ ಧನಾ ಪೇಕ್ಷೆಮಾಡುವುದು) ಜ್ಞಾನಿಯ ದೃಷ್ಟಿಯಿಂದ ಅಪರಾಧವಾಗಿದೆ; ಮತ್ತು

ಧನವನ್ನು ಕದಿಯುವುದು ಸರ್ಕಾರದ ವಿಧಿಯಪ್ರಕಾರ ಅಪರಾಧವಾಗಿದೆ, ವಾಸ್ತವದಲ್ಲಿ ಧನಾಪೇಕ್ಷಿ ಮತ್ತು ಕಳ್ಳ ಇವರಿಬ್ಬರೂ ಅಪರಾಧಿಗಳೇ

23 ಕಳ್ಳನು ನಿಂದೆಗೆ ಗುರಿಯಾಗುತ್ತಾನೆ ಪರಿಗ್ರಹಲಿಪ್ತನನ್ನು ನಿಂದೆಮಾಡುವವರಾರು? ಕಳ್ಳನು ಎಷ್ಟರವಟ್ಟಿಗೆ ದಯಾಪಾತ್ರನೋ (ದಯೆಗೆ ಯೋಗ್ಯನೋ) ಅಷ್ಟರವಟ್ಟಿಗೇ ಪರಿಗ್ರಹಲಿಪ್ತನೂ ದಯಾಪಾತ್ರನಾಗುತ್ತಾನೆ.

24. ಕಳ್ಳನು ಒಬ್ಬನ ವಸ್ತುವನ್ನು ಕದಿಯುತ್ತಾನೆ. ಆದರೆ ಹಣವಂತನಾದರೋ ನೂರಾರುಜನ ಗ್ರಾಹಕ (ಸಾಲ ತೆಗೆದುಕೊಳ್ಳುವವ) ರಿಂದ ಅನೀತಿ, ಅನ್ಯಾಯ ಮತ್ತು ಸುಳ್ಳು ಇವುಗಳ ಬಲದಮೇಲೆ ಹಣವನ್ನು ಕಿತ್ತುಕೊಳ್ಳುತ್ತಾನೆ

25 ಹಣವಂತನು ಕಳ್ಳನನ್ನು ದೂಷಿಸುತ್ತಾನೆ ಕಳ್ಳನು ಸಿರಿವಂತನನ್ನು ನಿಂದಿಸುವಾಗ ಅವನನ್ನು ಕುರಿತು "ನೀನು ನಮ್ಮಿಂದ ಹೆಚ್ಚುಬಡ್ಡಿ ತೆಗೆದುಕೊಂಡು ನಮ್ಮಲ್ಲಿ ತಿನ್ನುವುದಕ್ಕೂ ಸ್ವಲ್ಪ ಉಳಿಯಬಾರದಷ್ಟುಮಟ್ಟಿಗೆ ನಮ್ಮನ್ನುಲೂಟಿಮಾಡಿದೆ (ಸರ್ವಸ್ವಾಪಹರಣ-ಏನೂ ಉಳಿಯದಂತೆ ಮಾಡು), ಇದರಿಂದ ನಾವು ಕಳ್ಳತನಮಾಡುತ್ತೇವೆ ಇದರಲ್ಲಿ ನಮ್ಮ ದೋಷವೇನಿದೆ?" ಎಂದು ಹೇಳುತ್ತಾನೆ

26 ಈ ಕಾಲದಲ್ಲಿ ಕೇವಲ ಹಣದಿಂದಲೇ ಮನುಷ್ಯನ ಖಾನದಾನಿ (ಅಂತಸ್ತು—ಯೋಗ್ಯತೆ)ಯನ್ನು ತಿಯುತ್ತಾರೆ. ಪೂರ್ವಕಾಲದಲ್ಲಿ ಧರ್ಮದಿಂದ ತಿಳಿಯಲ್ಪಡುತ್ತಿದ್ದಿತು.

27. ಬುದ್ಧಿಯಲ್ಲಿ ಶ್ವಾನವೃತ್ತಿಯಿದೆ, ಬೊಗಳುವ ಅಭ್ಯಾಸವಿದೆ, ಆದರೆ ಶ್ರದ್ಧೆಯಲ್ಲಿ ಸಿಂಹವೃತ್ತಿಯಿದೆ. ಸದ್ದುಮಾಡದೆ ಕಾರ್ಯಸಾಧನೆ ಮಾಡಲ್ಪಡುತ್ತದೆ

28 ಚೈತನ್ಯವಾದದ ಜ್ಞಾನವುಂಟಾಗುವುದಾದರೆ ಲೋಕದಲ್ಲಿ ಪರಮ ಶಾಂತಿಯುಂಟಾಗುತ್ತದೆ ಜಡವಾದದ ಕಾರಣದಿಂದಲೇ ದ್ವೇಷ, ಕ್ಲೇಶ, ಈರ್ಷೆ ಮತ್ತು ನಿಂದೆ ಇವುಗಳು ರಾಜ್ಯಭಾರಮಾಡುತ್ತಿವೆ.

29 ಧ್ಯಾನಿಯ ಗುಹೆಯಲ್ಲಿ ಸಿಂಹ, ಹುಲಿ ಮತ್ತು ಹಾವು ಇವುಗಳು ಮನೆಮಾಡಿಕೊಂಡಿರುತ್ತವೆ ಅದೇರೀತಿಯಲ್ಲಿ ಈ ಕಾಲದ ಎಷ್ಟೋಜನ ತ್ಯಾಗಿಗಳಲ್ಲಿ ಮತ್ತು ವಿರಾಗಿ (ಸರ್ವಸಂಗಪರಿತ್ಯಾಗಿ) ಗಳಲ್ಲಿ ದ್ವೇಷ, ಮತ್ಸರ,

ನಿಂದೆ ಮೊದಲಾದ ಮಲಿನ (ಕೆಟ್ಟ) ವೃತ್ತಿಗಳು ನೆಲಸಿರುವುದು ಕಂಡು ಬರುತ್ತಿದೆ

30 ತಿಂದ ಆಹಾರವು ಜೀರ್ಣವಾಗದಿದ್ದಾಗ ವಮನ ಮತ್ತು ವಿರೇಚನೆಗಳನ್ನು ಮಾಡಿಸುವುದು ತಕ್ಕುದಾಗುತ್ತದೆ ಅದೇರೀತಿಯಲ್ಲಿ ಜಿನೇಶ್ವರನ ಮಾತು (ಉಪದೇಶ) ಗಳು ಜೀರ್ಣವಾಗದಿದ್ದರೆ (ಸರಿಯಾಗಿ ಗ್ರಹಣವಾಗದಿದ್ದರೆ), ಅದಕ್ಕೆ ಅಡ್ಡಿಯಾಗಿರುವ ಮಿಥ್ಯಾಭಾವವನ್ನು ವಮನ ಅಥವಾ ವಿರೇಚನದಿಂದ ಹೊರಕ್ಕೆ ತೆಗೆಯುವುದು ಸರಿಯಾದ ಕಾರ್ಯವಾಗುತ್ತದೆ

31 ಧರ್ಮಶಾಸ್ತ್ರವು ಈ ಜೀವನವನ್ನು ಮತ್ತು ಮುಂದಿನ ಅನಂತ ಸಂಖ್ಯೆಯ ಜೀವನಗಳನ್ನು ಪವಿತ್ರವನ್ನಾಗಿ ಮಾಡತಕ್ಕ ಅಪಾರಶಕ್ತಿಯುತವಾದ ಯಂತ್ರವಾಗಿದೆ

32 ಕರ್ತವ್ಯದಿಂದ ಅಧೋಗತಿ (ಪಾಪಾಚರಣೆಯಿಂದ ತಿರ್ಯಂಚ ನಾರಕಗಳೆಂಬ ದುರ್ಗತಿಗೆ ಇಳಿಯುವಿಕೆ)ಯನ್ನು ತಪ್ಪಿಸಿಕೊಳ್ಳುವುದೇ ಧರ್ಮವಾಗಿದೆ (ಪಾಪಕಾರ್ಯಗಳಿಂದುಂಟಾಗುವ ದುರ್ಗತಿಯಿಂದ ಆತ್ಮನನ್ನು ಬಿಡಿಸಿಕೊಳ್ಳುವುದೇ ಧರ್ಮವಾಗುತ್ತದೆಯೆಂದು ಭಾವ)

33 ಪಾನಭೋಜನಗಳಲ್ಲಿ ಅವಿಧಿ (ನಿಯಮವಿಲ್ಲದಿರುವಿಕೆ) ಯನ್ನು ಮಾಡುವವನ ಸ್ವಾಸ್ಥ್ಯವು (ಪೂರ್ಣವಾದ ಆರೋಗ್ಯಸ್ಥಿತಿ) ತೂಕಡಿಸುತ್ತಿರುತ್ತದೆ ಪಾನಭೋಜನಗಳ ವಿಷಯದಲ್ಲಿ ವಿವೇಕದಿಂದ ವರ್ತಿಸುವವನು ಸ್ವಸ್ಥನಾಗಿರುತ್ತಾನೆ ಇದೇರೀತಿ ಜ್ಞಾನಿಯಾದವನು ವಿವೇಕದಿಂದ ಜೀವನವನ್ನು ಸಾಗಿಸುತ್ತಾನೆ, ಮತ್ತು ಅಜ್ಞಾನಿಯು ತನ್ನ ಆತ್ಮನ ಸ್ವಾಸ್ಥ್ಯವು (ಸಹಜಸ್ಥಿತಿ) ನಾಶವಾಗುವಂತಹ ಪಾಪಮಯವಾದ ಜೀವನವನ್ನು ನಡೆಸುತ್ತಾನೆ

34 ಧಾರ್ಮಿಕಜೀವನವು (ಧರ್ಮಮಾರ್ಗದಲ್ಲಿ ನಡೆಯುವಿಕೆ) ಆತ್ಮನ ಸ್ವಾಸ್ಥ್ಯವೆನಿಸುತ್ತವೆ ಸ್ವಸ್ಥನಾದ ಮನುಷ್ಯನು (ಆತ್ಮನನ್ನು ಕೆಡಿಸಿಕೊಳ್ಳದಿರುವವನು) ಸ್ವರ್ಗಮೋಕ್ಷಗಳಿಗೆ ಹೋಗುತ್ತಾನೆ.

35. ವಿಷಯಕಷಾಯಗಳಿಂದ ಕೂಡಿದವನ ಜೀವನವು ರೋಗಿಯ ಜೀವನದಂತಿದೆ. ರೋಗಿಯು ಬಾಧೆಗೊಳಗಾಗುತ್ತಾನೆ ವಿಷಯಕಷಾಯಗಳೆಂಬ ರೋಗದಿಂದ, ರೋಗಿಯು ನರಕನಿಗೋದಗಳೆಂಬ ಹಳ್ಳಕ್ಕೆ ಬೀಳುತ್ತಾನೆ

36 ಶರೀರವು ಸ್ಥೂಲಪದಾರ್ಥವಾಗಿದೆ ಇದಕ್ಕುಂಟಾಗುವ ರೋಗ ರುಜಿನಗಳೂ ಸ್ಥೂಲವಾಗಿವೆ

37 ಆತ್ಮನು ಅರೂಪಿ (ಅಮೂರ್ತ–ಆಕಾರರಹಿತ)ಯೂ ಸೂಕ್ಷ್ಮನೂ ಆಗಿದ್ದಾನೆ ಈ ಆತ್ಮನಿಗುಂಟಾಗುವ ರೋಗರುಜಿನಗಳೂ ಸೂಕ್ಷ್ಮವಾದವು ಗಳಾಗಿವೆ

38 ಆತ್ಮನಿಗುಂಟಾಗುವ ಸೂಕ್ಷ್ಮವಾದ ರೋಗಗಳನ್ನು ಜ್ಞಾನಿಯಾದವನು ಮಾತ್ರ ತಿಳಿಯಬಲ್ಲನು ಅಜ್ಞಾನಿಯಾದವನು ಕುರುಡನಂತೆ ಆತ್ಮನಿಗುಂಟಾಗುವ ರೋಗಗಳನ್ನು ನೋಡಲಾರನು. ಅವನಾವಾಗಲೂ ಶರೀರ ಸಂಬಂಧವಾದ ಚಿಂತೆಯನ್ನು ಮಾಡುತ್ತಿರುತ್ತಾನೆ

39. ವಿಜ್ಞಾನವು ವೈರ್‌ಲೆಸ್ (ತಂತಿಯ ಆಧಾರವಿಲ್ಲದೆ ಶಬ್ದವನ್ನು ಆಕರ್ಷಿಸುವುದು), ಏರೋಪ್ಲೇನ್ (ಆಕಾಶದಲ್ಲಿ ಸಂಚರಿಸುವ ವಿಮಾನ), ವಿದ್ಯುಚ್ಛಕ್ತಿ, ಫೋಟೋಗ್ರಾಫ್ (ರೂಪಗ್ರಹಣ), ರೈಲ್ವೆ, ಟೆಲಿಗ್ರಾಫ್, ಮೋಟಾರ್‌ಕಾರ್ ಮೊದಲಾದವುಗಳನ್ನು ಸೃಷ್ಟಿಸುವಶಕ್ತಿಯುಳ್ಳದಾಗಿದೆ, ಆದರೆ ಚೈತನ್ಯತತ್ವವನ್ನು ಹುಡುಕಲಾರದಾಗಿದೆ ಚೈತನ್ಯಸೃಷ್ಟಿಯ ಬಗೆಯನ್ನು ಜ್ಞಾನಿಯಾದವನು ಮಾತ್ರ ತಿಳಿಯಬಲ್ಲನು ಜ್ಞಾನಿಯ ಜ್ಞಾನ ಶಕ್ತಿಯ ಚಮತ್ಕಾರವು (ವಿಚಿತ್ರವಾದ ಶಕ್ತಿ) ವಿಜ್ಞಾನಿಯ ಶಕ್ತಿಗಿಂತಲೂ ಅಪಾರಅಧಿಕವಾದುದಾಗಿದೆ.

40 ಧರ್ಮಸ್ಥಾನವು (ದೇವಮಂದಿರ ಮತ್ತು ಧರ್ಮೋಪದೇಶಸ್ಥಾನ) ಶಾಂತಿ, ವೈರಾಗ್ಯ ಮತ್ತು ವೀತರಾಗತ್ವ ಇವುಗಳಿಗೆ ಉಯ್ಯಾಲೆಯಂತಿದೆ.

41 ಭೂಮಾರ್ಗಕ್ಕಿಂತ ಜಲಮಾರ್ಗದಲ್ಲಿ, ಜಲಮಾರ್ಗಕ್ಕಿಂತ ಆಕಾಶ ಮಾರ್ಗದಲ್ಲಿ ಸ್ಖಲನ (ತಪ್ಪಿನಡೆದರೆ ಅಪಾಯಉಂಟಾಗುವ ಸಂಭವ) ಹೆಚ್ಚಾಗಿರುತ್ತದೆ ಆತ್ಮಸಂಬಂಧವಾದ ಮಾರ್ಗದಲ್ಲಿ ನಡೆಯುವಾಗ ಬಹಳ ಜಾಗರೂಕತೆಯಿಂದಿರುವುದು ಆವಶ್ಯವಾಗಿದೆ

42 ಪಂಚೇಂದ್ರಿಯಗಳು ಮತ್ತು ಕ್ರೋಧಾದಿ ಕಷಾಯಗಳು ಇವುಗಳ ಹಾವಳಿಯು (ಕಾರ್ಯಪಟುತ್ವ–ಆಧಿಪತ್ಯ) ನಾಶವಾಗುವುದಾದರೆ, ಅಧರ್ಮವು ಕಡಮೆಯಾಗಿ ಸರ್ವತ್ರ ಧರ್ಮಪ್ರಚಾರವಾಗುವ ಸಂಭವವಿದೆ

43 ಸೇವೆಮಾಡುವವನು ಸೇವೆಮಾಡುವುದು ಇತರರನ್ನಲ್ಲ, ತನ್ನನ್ನೇ ಸೇವೆಮಾಡುತ್ತಿರುತ್ತಾನೆ.

44. ಸೇವೆಯೇ ನಿಜವಾದ ಸ್ವಾರ್ಥ (ತನಗೆ ಹಿತವನ್ನುಂಟುಮಾಡುವುದು) ವಾಗಿದೆ. ಉಳಿದುದೆಲ್ಲವೂ ವ್ಯರ್ಥ (ಪ್ರಯೋಜನವಿಲ್ಲದುದು) ವಾಗಿರುತ್ತದೆ.

45. ಭೋಜನವು ಪರೋಪಕಾರವಾಗುವುದಿಲ್ಲ. ಹಾಗೆಯೇ ಧರ್ಮಧ್ಯಾನಮಾಡುವುದು, ದಾನಮಾಡುವುದು ಮೊದಲಾದುವುಗಳೂ ಪರೋಪಕಾರವಾಗುವುದಿಲ್ಲ, ಆದರೆ ಅವೆಲ್ಲವೂ ಸ್ವೋಪಕಾರ (ತನಗೇ ಹಿತವನ್ನುಂಟುಮಾಡುವವು) ವಾಗುತ್ತವೆ.

46. ಒದಗಿಬಂದ ಕಷ್ಟವನ್ನು ಸಹಿಸುವ ಪ್ರಯತ್ನಮಾಡುವವನೇ ಸವ ದೃಷ್ಟಿಯು

47. ಜ್ಞಾನಿಯಾದವನು ದುಃಖವನ್ನು ಕೈಬೀಸಿ ಕರೆಯುತ್ತಾನೆ, ಉದೀರಣಮಾಡುತ್ತಾನೆ (ಸಹಿಸಿ ಬಿಡಿಸಿಕೊಳ್ಳುತ್ತಾನೆ) ಅಜ್ಞಾನಿಯು ದುಃಖ ಬಂದಾಗ ಅಳುತ್ತಾನೆ

48. ಆತ್ಮನು ಸಂಸಾರರೂಪವಾದ ಕುಟುಂಬದ ಮನೆಯಂತಾಗುತ್ತಾನೆ

49. ದೌರ್ಭಾಗ್ಯನಮೇಲೆ (ದುಃಖಿಗಳಾದವರಮೇಲೆ) ದಯತೋರಿಸುವವನೇ ಭಾಗ್ಯಶಾಲಿ (ಸುಖ ಸಾಧನಗಳುಳ್ಳವನು) ಯಾಗುತ್ತಾನೆ. (ದೀನದಯಾಪರತ್ವವೇ ದೊಡ್ಡ ಸಂಪತ್ತೆಂದು ಭಾವ).

50 ಯಾವನ ಅಂತರಂಗದಲ್ಲಿ ಮೋಹದ ಗ್ರಂಥಿ, (ಅಂದರೆ ಅಸ್ತಿತ್ವ-ಕಾರ್ಯಕಲಾಪ ಅಥವಾ ಅಡಳಿತ) ನಷ್ಟವಾಗಿ ಹೋಗಿರುತ್ತದೆಯೋ ಅವನೇ ಪರಮಾತ್ಮನು.

51. ಕ್ರಿಯೆಯೇ ಕರ್ಮ, ಉಪಯೋಗವೇ ಧರ್ಮ, ಪರಿಣಾಮವೇ ಬಂಧ, ಭ್ರಾಂತಿಯೇ ಮಿಥ್ಯಾಭಾವ, ಇಂತೆಂಬ ಉತ್ತಮವಸ್ತುಗಳನ್ನು (ಉಪದೇಶ) ಜ್ಞಾನಿಗಳಾದವರು ನಮಗೆ ಕೊಟ್ಟಿರುತ್ತಾರೆ

52. ಸಮ್ಯಗ್ದರ್ಶನವುಳ್ಳವನ ದೃಷ್ಟಿಯಲ್ಲಿ ನೋಡಿದರೆ, ಯಾರು ಯಾವ ಧರ್ಮಶಾಸ್ತ್ರವನ್ನು ಓದಿ ತಿಳಿದರೂ ಅದರಿಂದ ಆತ್ಮಹಿತಸಾಧನೆ ಮಾಡಿಕೊಳ್ಳಬಹುದೆಂದು ಕಂಡುಬರುತ್ತದೆ

53. ಅಲ್ಪವಾದ ಆಹಾರ, ಅಲ್ಪವಾದ ವಿಹಾರ, ಅಲ್ಪವಾದ ನಿದ್ರೆ, ಮಿತಭಾಷಣ, ನಿಯಮಯುತ ಕಾಯ ಮತ್ತು ಅನುಕೂಲವಾದ ಸ್ಥಾನ ಇವುಗಳು ಮನಸ್ಸನ್ನು ವಶಮಾಡಿಕೊಳ್ಳುವುದಕ್ಕೆ ಉತ್ತಮವಾದ ಸಾಧನಗಳಾಗಿವೆ

54 ನಿರ್ಬಲನಾದ ಆತ್ಮನು ಪ್ರಲೋಭನೆಗಳಿಗೆ ಸಿಕ್ಕಿಬೀಳುತ್ತಾನೆ, ಮತ್ತು ಅವುಗಳಿಂದ ಪರಾಜಿತನಾಗಿಹೋಗುತ್ತಾನೆ ಬಲಿಷ್ಟನಾದ ಆತ್ಮನು ಪ್ರಲೋಭನೆಗಳಿಗೆ ಸಿಕ್ಕಿಬೀಳದೆ ಕರ್ಮಗಳನ್ನು ನಾಶಮಾಡಿಬಿಡುತ್ತಾನೆ

55. ನಾಟಕ, ಸಿನಿಮಾ, ಹೊಟೇಲು ಮೊದಲಾದವುಗಳು ರಂಗ (ಚಿತ್ತಾಕರ್ಷಕನಸ್ತು) ಅಥವಾ ರಸಾಸ್ವಾದಕ್ಕೆ ಸಾಧನಗಳಾಗಿವೆ ಆದರೆ ಅವು ಮನುಷ್ಯನನ್ನು ಬಲಾತ್ಕಾರಮಾಡಿ ಕರೆಯುವುದಿಲ್ಲ. ಆದೇ ರೀತಿಯಲ್ಲಿ ಕರ್ಮಗಳೂ ಕ್ರೋಧಾದಿ ಕಷಾಯಗಳನ್ನು ನಿರ್ಬಂಧಿಸುವುದಿಲ್ಲ. ಇಷ್ಟಕ್ಕನು ಸಾರವಾಗಿ ಕಷಾಯಿಯೋ (ಕಷಾಯಗಳಿಗೆ ವಶೀಭೂತನೋ) ಅಥವಾ ವಿರಾಗಿಯೋ (ಇಚ್ಛೆಯನ್ನು ಜಯಿಸಿದವನೋ) ಆಗಗೊಡುತ್ತವೆ. ಆದುದರಿಂದ ಸರಾಗಿಯೋ (ಇಚ್ಛಾಧೀನನೋ) ಅಥವಾ ವಿರಾಗಿಯೋ (ಇಚ್ಛಾತೀತನೋ) ಆಗುವುದು ಅವನವನ ಸ್ವಾಧೀನದಲ್ಲಿದೆ.

56 ಬಲಿಷ್ಟನಾದ ಆತ್ಮನು ಕರ್ಮವನ್ನು ನಷ್ಟಪಡಿಸಿಕೊಳ್ಳುತ್ತಾನೆ, ನಿರ್ಬಲನಾದ ಆತ್ಮನು ಕರ್ಮಗಳಿಗೆ ಸ್ವಾಧೀನನಾಗಿಹೋಗುತ್ತಾನೆ

57. ಬಾಹ್ಯಕ್ರಿಯೆಗಳನ್ನು ಪಾಪವೆಂದು ಪರಿಗಣಿಸುತ್ತಾರೆ, ಹಾಗೆ ಕಷಾಯಗಳಲ್ಲಿಯೂ ಪಾಪವನ್ನು ತಿಳಿಯುವವರು ಅತಿವಿರಳ.

58. ಯೋಗದ (ಮನ ವಚನ ಕಾಯಗಳ) ಶಾಂತ ಸ್ಥಿತಿಯೂ (ನಿಷ್ಕರ್ಮಭಾವ–ಕೆಲಸಮಾಡದಿರುವಿಕೆ), ಕ್ರೋಧಾದಿ ಕಷಾಯಗಳ ಉಗ್ರತೆಯೂ ಉಂಟಾಗುವುದೆಂದರೆ ಕೊಕ್ಕರೆಹಕ್ಕಿಯು ಮಾಡುವ ತಪಸ್ಸಿನಂತಾಗುತ್ತದೆ (ಕೊಕ್ಕರೆಯು ಒಳಗೆ ಕಷಾಯಗಳು ತುಂಬಿದ್ದರೂ, ಹೊರಕ್ಕೆ ಕಣ್ಣುಮುಚ್ಚಿಕೊಂಡು ಧ್ಯಾನಮಾಡುತ್ತಿರುವಂತೆ ನಟಿಸುವ ರೀತಿಯಾಗುತ್ತದೆಂದು ಭಾವ–ಅಂದರ ಕಷಾಯಗಳು ತೀವ್ರಸ್ಥಿತಿಯಲ್ಲಿರುವಾಗ ಮನ ವಚನ ಕಾಯಗಳು ಶಾಂತಸ್ಥಿತಿಯಲ್ಲಿರಲಾರವು).

59 ಯೋಗನಿರೋಧದ (ಮನ ವಚನ ಕಾಯಗಳನ್ನು ತಡೆಗಟ್ಟು

ವುದು) ಚಿಂತೆಯೇನೋ ಉಂಟಾಗುತ್ತದೆ ಆದರೆ ಕ್ರೋಧಾದಿ ಕಷಾಯ ಗಳ ನಿರೋಧವು (ತಡೆಗಟ್ಟುವಿಕೆ) ಉಪೇಕ್ಷಿಸಲ್ಪಡುತ್ತದೆ ಕ್ರೋಧಾದಿ ಕಷಾಯಗಳೇ ಸಂಸಾರವಾಗಿದೆ.

60. ಯೋಗದ (ಮನ ವಚನ ಕಾಯಗಳ) ಚಪಲತೆಯಂತೆಯೇ (ವಿಚಿತ್ರವರ್ತನೆ) ಕ್ರೋಧಾದಿ ಕಷಾಯಗಳ ಚಪಲತೆಯಲ್ಲಿಯೂ ಪಾಪಲೇಪವು ತಿಳಿಯಲ್ಪಡುವುದಾದರೆ, ಜೀವನು ಶೀಘ್ರವಾಗಿ ಮೋಕ್ಷಗಾಮಿಯಾಗುತ್ತಾನೆ ಆದರೆ ಲೋಕದ ತಿಳುವಳಿಕೆಯು ಇದಕ್ಕೆ ವಿಪರೀತ (ವಿರುದ್ಧ) ವಾಗಿದೆ

61 ಯೋಗದ (ಮನ ವಚನ ಕಾಯಗಳ) ಪ್ರವೃತ್ತಿಯು ಕೂದಲಿಗೆ ಸಮಾನವಾಗಿದೆ, ಮತ್ತು ಕ್ರೋಧಾದಿ ಕಷಾಯಗಳ ಪ್ರವೃತ್ತಿಯು ತಲೆಗೆ ಸಮಾನವಾಗಿದೆ ಕೂದಲನ್ನು ರಕ್ಷಿಸಿಕೊಂಡು ತಲೆಯನ್ನು ಕತ್ತರಿಸುವುದು ಹೇಗೆ? ಯೋಗದ ನಿರೋಧವುಂಟಾಗುವುದಾದರೆ ಕಷಾಯವೆಂಬ ಕುದುರೆಯು ಓಡಿಯೇಹೋಗುತ್ತದೆ.

62. ನಾವೆಯನ್ನು ಒಡೆಯುವುದು ಪಾಪವೆಂದು ಪರಿಗಣಿಸಲ್ಪಡುತ್ತದೆ ದುಷ್ಪರಿಣಾಮದಲ್ಲಿ ಅಷ್ಟು ಪಾಪವುಂಟೆಂದೂ ತಿಳಿಯುವುದಿಲ್ಲ

63 ಕ್ರೋಧ, ಮಾನ, ಮಾಯೆ, ಲೋಭ, ರಾಗ (ಪ್ರೀತಿ), ದ್ವೇಷ ಇವುಗಳು ಯಾವಾಗಲೂ ಜೀವನಿಗೆ ಶತ್ರುಗಳಾಗಿವೆ ಜೀವನು ಇವುಗಳನ್ನು ಮಿತ್ರರೆಂದು ತಿಳಿದು ಕುಳಿತಿರುವನು. ಈಗಲಾದರೂ ಅವುಗಳನ್ನು ಶತ್ರುಗಳೆಂದು ತಿಳಿದು ನಾಶಮಾಡಿಕೊಳ್ಳಿರಿ

64 ಕರ್ಮಗಳ ಸಂಗಡ ಹೋರಾಡುವುದರಲ್ಲಿ ಆನಂದವಿದೆ ಇದರೆ ಮೂಕನಂತಾಗಿ ಅವುಗಳಿಂದ ಏಟುತಿನ್ನುವುದೆಂದರೆ ನಾಚಿಕೆಯಮಾತಾಗುತ್ತದೆ.

65. ಜ್ಞಾನಿಯು ಸ್ವಾಧೀನನಾಗಿದ್ದಾನೆ, ಅಜ್ಞಾನಿಯು ಪರಾಧೀನನಾಗಿದ್ದಾನೆ

66. ಗಾಳಿಯು ಹುಲ್ಲನ್ನು ಇಲ್ಲಿಂದಲ್ಲಿಗೆ ಹಾರಾಡಿಸುವಂತೆ, ಕರ್ಮವು ಅಜ್ಞಾನಿಯನ್ನು ಹಾರಾಡಿಸುತ್ತದೆ. ಆದರೆ ಜ್ಞಾನಿಯು ಮೇರುಪರ್ವತದಂತೆ ಸ್ಥಿರವಾಗಿರುತ್ತಾನಾಗಿ ಕರ್ಮವೆಂಬ ವಾಯುವು ತಾನೇ ಸೋತುಹೋಗಿ ನಷ್ಟವಾಗಿ ಹೋಗುತ್ತದೆ.

67. ಹಣವನ್ನು ಸಂಪಾದಿಸುವುದಕ್ಕಾಗಿ ನೀನು ಪಾಪದ ಗಂಟುಕಟ್ಟಿ ಕೊಳ್ಳುತ್ತಿದ್ದೀಯೆ, ಮತ್ತು ಆ ಧನವನ್ನು ದಾನವಾಗಿಯೂ ಕೊಡುವುದಿಲ್ಲ ಹೇಗಾದರೂ ನಿನ್ನ ಮರಣಾನಂತರ ನಿನ್ನ ಕುಟುಂಬದವರು ಅದನ್ನು ಉಪ ಭೋಗಿಸಿಕೊಳ್ಳಬಹುದು. ಆದರೆ ನೀನು ಪಾಪಕ್ಕೆ ಭಾಗಿಯಾಗಿಯೇ ಇರು ತ್ತೀಯೆ ನೀನು ಸತ್ತ ಬಳಿಕವೂ ನಿನಗೆ ಪಾಪಲೇಪ ಉಂಟಾಗಿಯೇ ಇರುತ್ತದೆ ಯೆಂದರೆ ಇದು ಎಂತಹ ವಿಚಿತ್ರವಾದ ಮಾತು? ಹೀಗಿದ್ದರೂ ಈ ಪಾಪಿ ಧನಕ್ಕಾಗಿ ಇಷ್ಟು ಗರ್ವ ಮತ್ತು ಮೋಹವನ್ನೇಕೆ ಮಾಡುತ್ತೀಯೆ?

68 ಮನುಷ್ಯನು ಶರೀರವನ್ನು ಕುರಿತು ಚಿಂತಿಸುವಂತೆಯೇ ಆತ್ಮ ನನ್ನೂ ಕುರಿತು ಚಿಂತೆಮಾಡುವುದಾದರೆ, ಅವನು ಇದೇ ಭವದಲ್ಲಿ ಮೋಕ್ಷ ಪ್ರಾಪ್ತಿಮಾರ್ಗಕ್ಕೆ ಅತ್ಯಂತ ಸಮೀಪವರ್ತಿಯಾಗುತ್ತಾನೆ

69 ಶರೀರಸಂಬಂಧವಾದ ಸುಖವು ಪರಾಧೀನವಾಗಿದೆ ಆದರೆ ಆತ್ಮಸಂಬಂಧಿಯಾದ ಸುಖವು ಸ್ವಾಧೀನವಾಗಿದೆ

70. ಶರೀರಸಂಬಂಧಿಯಾದ ಸುಖವು ಕ್ಷಣಿಕವಾಗಿದೆ ಆದರ ಆತ್ಮ ಸಂಬಂಧವಾದ ಸುಖವು ಶಾಶ್ವತವಾದುವಾಗಿದೆ

71 ಸಮದೃಷ್ಟಿಯು ವಿಶ್ವವನ್ನೇ ಪ್ರೀತಿಸುತ್ತಾನೆ

72. ಸಮದೃಷ್ಟಿಯು ಲೋಕದ ಹಿತದಲ್ಲಿ ತನ್ನ ಹಿತವನ್ನು ತಿಳಿ ಯುತ್ತಾನೆ

73. ಗುಪ್ತದಿಂದ ಗುಪ್ತವಾದ (ಅತ್ಯಂತ ಗೋಪ್ಯವಾದ) ವಿಚಾರ ಗಳನ್ನು ಪವಿತ್ರವನ್ನಾಗಿಟ್ಟುಕೊಳ್ಳಬೇಕು

74 ವಿಚಾರಗಳನ್ನು (ಭಾವನೆಗಳನ್ನು) ಮಾತ ಗಳಿಂದ ಪ್ರಕಟಪಡಿಸು ಅಥವಾ ಮನಸ್ಸಿನಲ್ಲಿ ಬಚ್ಚಿಟ್ಟುಕೋ ಹೇಗಾದರೂ ವಿಚಾರ (ಭಾವನೆ) ಗಳ ಪ್ರಭಾವವು ಅನ್ಯರಮೇಲೆ ಉಂಟಾಗೇ ಆಗುತ್ತದೆ

75 ನಿನಗೆ ಗುಣಗಳಲ್ಲಿ ಆಕ್ಕರೆಯಿದ್ದರೆ ಅನ್ಯರ ದೋಷಗಳನ್ನು ಗುಣ ಗಳನ್ನಾಗಿ ಪರಿಗಣಿಸುತ್ತೀಯೆ.

76 ಹಾಗಲ್ಲದೆ, ನಿನಗೆ ದೋಷಗಳಲ್ಲಿ ಆಕ್ಕರೆಯಿದ್ದರೆ, ಅನ್ಯರ ಗುಣ ಗಳನ್ನು ಲಕ್ಷ್ಯಕ್ಕೆ ತಂದುಕೊಳ್ಳದೆ ದೋಷಗಳನ್ನು ಮಾತ್ರ ನೋಡುತ್ತೀಯೆ.

77 ಹಂಸೆಯು ಮುತ್ತನ್ನೂ ಕಾಗೆಯು ದುರ್ಗಂಧಯುತವಾದ

ಮಾಂಸವನ್ನೂ ಹುಡುಕುತ್ತಿರುತ್ತವೆ. ಹಾಗೆಯೇ ಗುಣವಂತನು ಗುಣಗಳನ್ನೂ, ದೋಷಿಯು ದೋಷಗಳನ್ನೂ ಸ್ವೀಕರಿಸುತ್ತಿರುತ್ತಾರೆ

78 ವಿಚಾರ (ಭಾವನೆ) ಕ್ಕೆ ತಕ್ಕ ಆಚರಣೆಯೂ, ಆಚರಣೆಗೆ ತಕ್ಕಂತಹ ಗತಿಯೂ ಉಂಟಾಗುತ್ತದೆ

79 ಗುಣಗ್ರಾಹಿಯು ದ್ವೇಷಿಯನ್ನು ಮಿತ್ರನನ್ನಾಗಿಯೂ, ದೋಷಗ್ರಾಹಿಯು ಮಿತ್ರನನ್ನೂ ಶತ್ರುವನ್ನಾಗಿ ಮಾಡಿಕೊಳುತ್ತಾರೆ.

80. ಗುಣಗ್ರಹಣವೆಂಬ ವಶೀಕರಣಮಂತ್ರದಿಂದ ಲೋಕವೇ ವಶೀಭೂತವಾಗುತ್ತದೆ

81 ಗುಣದೃಷ್ಟಿಯು ಸದಾಚಾರವಾಗಿದೆ, ದೋಷದೃಷ್ಟಿಯು ದುರಾಚಾರವಾಗಿದೆ

82 ಗುಣವಂತನು ಒಳ್ಳೆಯ ಶೀಲವುಳ್ಳವನಾಗುತ್ತಾನೆ, ದೋಷಿಯು ವ್ಯಭಿಚಾರಿ (ಮಾರ್ಗಭ್ರಷ್ಟ) ಯಾಗಿರುತ್ತಾನೆ

83 ಗುಣದೃಷ್ಟಿಯು ಧರ್ಮಕ್ಕೆ ಸಮ್ಮುಖನಾಗಿರುತ್ತಾನೆ ಮತ್ತು ದೋಷದೃಷ್ಟಿಯು ಧರ್ಮಕ್ಕೆ ವಿಮುಖನಾಗಿರುತ್ತಾನೆ

84. ಅತಿಯಾದ ಸಂತಾನೋತ್ಪತ್ತಿಯು ಆರ್ಥಿಕದೃಷ್ಟಿಯಿಂದ ದೇಶಕ್ಕೆ ದುರ್ದೆಶೆಯನ್ನುಂಟುಮಾಡಲು ತಕ್ಕುದಾಗಿವೆ.

85 ಯಾವ ಮನುಷ್ಯನು ತನ್ನ ಪತ್ನಿಯನ್ನು ಬಿಟ್ಟು ಅನ್ಯಸ್ತ್ರೀಯ ಬಳಿಗೆ ಹೋಗುತ್ತಾನೋ, ಅವನು ಸ್ವತಃ ತಾನು ದುರಾಚಾರಿಯಾಗುತ್ತಾನೆ ಮತ್ತು ತನ್ನ ಹೆಂಡತಿಗೆ ದುರಾಚಾರಿಣಿಯಾಗುವ ಪಾಠವನ್ನು ಕಲಿಸುತ್ತಾನೆ.

86. ಲೋಕದಲ್ಲಿ ಭಿನ್ನತೆ (ಬೇರೆಬೇರೆಯಾಗಿರುವಿಕೆ) ಯಿರುವುದೇನೋ ಸರಿಯೆ. ಆದರೆ ವಿರುದ್ಧತೆ (ವಿರೋಧಭಾವ) ಯನ್ನು ಮಾಡಬೇಡ ಮತ್ತೊಬ್ಬರೊಡನೆ ಸ್ಪರ್ಧೆಯನ್ನು ಮಾಡುವುದೇನೋ ಒಳ್ಳೆಯದು (ಗೆಲ್ಲುವ–ಮುಂದಾಗುವ ಪ್ರಯತ್ನ). ಆದರೆ ಈರ್ಷೆಯನ್ನು (ಪರರ ಅಭ್ಯುದಯವನ್ನು ಸಹಿಸದಿರುವಿಕೆ–ಹೊಟ್ಟೆಯಕಿಚ್ಚು) ಮಾತ್ರ ಮಾಡಬೇಡ.

87 ರಾಗ (ಪ್ರೀತಿ) ದಿಂದ ಕೂಡಿದ ಮನುಷ್ಯನ ಉಪದೇಶದಲ್ಲಿ ಸ್ವಾರ್ಥದ (ಸ್ವಪ್ರಯೋಜನದ) ಅಂಶವಿದ್ದೇಯಿರುತ್ತದೆ. ರಾಗವನ್ನು

ಗೆದ್ದಿರುವವನ (ಪರಮಾತ್ಮನ) ಉಪದೇಶವು ಪರಮಾರ್ಥೋಪದೇಶ (ಮೋಕ್ಷ ಮಾರ್ಗೋಪದೇಶ) ವಾಗಿರುತ್ತದೆ.

88. ಒಂದೇಮಾತು ಮತ್ತು ಒಂದೇತೂಕ ಇವು ವ್ಯಾಪಾರದ ಅಭಿವೃದ್ಧಿಗೆ ನಿಜವಾದ ಸಾಧನಗಳಾಗಿವೆ.

89 ಕಬ್ಬಿಣದ ಸಂಕೋಲೆಯನ್ನು ಶಾರೀರಕಬಲದಿಂದ ಮುರಿದು ಹಾಕಲಾಗುತ್ತದೆ ಆದರೆ ಮೋಹದ ಸಂಕೋಲೆಯನ್ನು ವೈರಾಗ್ಯವೊಂದರಿಂದಲ್ಲದೆ ಬೇರಾವಶಕ್ತಿಯಿಂದಲೂ ಮುರಿದುಹಾಕಲಾಗುವುದಿಲ್ಲ

90. ಪರರನ್ನು ನಿಂದೆಮಾಡುವುದರಿಂದ ತನ್ನ ಶುದ್ಧಾಚರಣೆಯೂ ಅನ್ಯರ ಅಶುದ್ಧಾಚರಣೆಗೆ ಸಮನಾಗುತ್ತದೆ.

91. ಎಲ್ಲಿ ದ್ವೇಷವಿರುವುದೋ ಅಲ್ಲಿ ಧರ್ಮವಿರಲಾಗುವುದಿಲ್ಲ.

92 ಯಾವ ಮನುಷ್ಯನು ಲೋಭವನ್ನು ತನ್ನ ಅಧೀನಮಾಡಿಕೊಳ್ಳುತ್ತಾನೋ ಅವನೇ ನಿಜವಾದ ಯೋಗಿ, ಸ್ವಾಮಿ ಮತ್ತು ಸಂಸಾರತ್ಯಾಗಿ.

93. ಕ್ಷಮಾಗುಣವಿಲ್ಲದಿದ್ದಲ್ಲಿ, ಬೇರಾವ ಗುಣಗಳಿದ್ದರೂ ನಿಸ್ಸಾರವಾದಷ್ಟುಮಟ್ಟಿಗೆ ನಿರರ್ಥಕವಾಗುತ್ತವೆ (ಇದ್ದರೂ ಇಲ್ಲದಂತೆಯೇ)

94 ಯಾವ ದೇಶ, ಜಾತಿ ಮತ್ತು ಸಮುದಾಯಗಳಲ್ಲಿ ಪ್ರೀತಿಯ ಅಭಾವವಿರುವುದೋ ಆ ದೇಶ, ಜಾತಿ, ಸಮುದಾಯಗಳು ಅಜ್ಞಾನದಿಂದ ತುಂಬಿರುತ್ತವೆ–ಅಂದರೆ ಅವು ನಾಶವಾದಂತಯೇ

95. ಇತರರ ದೋಷಗಳನ್ನು ಎತ್ತಿಹೇಳುವ ಸ್ವಭಾವವು ತನ್ನ ದೋಷಗಳನ್ನು ಹೆಚ್ಚಿಸಿಕೊಳ್ಳುವುದಾಗುತ್ತದೆ. ಇದು ದುರ್ಗತಿಗೆ ವಿಶೇಷವಾದ ಕಾರಣವಾಗುತ್ತದೆ, ಮತ್ತು ಇದೇ ಮಿಥ್ಯಾದೃಷ್ಟಿಯ ಲಕ್ಷಣವಾಗಿದೆ.

96 ಯಾವನು ತ್ಯಾಗಯೋಗ್ಯವಾದ ಕಾರ್ಯಗಳಿಂದ ದೂರವಿರುತ್ತಾನೋ ಅವನೇ ನಿಜವಾದ ಆರ್ಯ (ಉತ್ತಮಕುಲದಲ್ಲಿ ಹುಟ್ಟಿದವನು) ನೆನಿಸುತ್ತಾನೆ ಇದಕ್ಕೆ ವಿರುದ್ಧವಾಗಿರುವವನು ಅನಾರ್ಯ.

97 ಮತ್ತೊಬ್ಬರ ಶರೀರವನ್ನು ನಾಶಮಾಡುವುದು (ಕೊಲ್ಲುವುದು) ಹಿಂಸೆಯೆಂದೆನಿಸಿಕೊಳ್ಳುವುದು ಸರಿ ಆದರೆ ದ್ವೇಷಬುದ್ಧಿಯಿಂದ ಅನ್ಯರ ಮನಸ್ಸಿಗೆ ದುಃಖವನ್ನುಂಟುಮಾಡುವುದೂ ಹಿಂಸೆಯಾಗುತ್ತದೆ

98 ಹಾವಿನ ಬಾಯಿಯಿಂದ ಅಮೃತವು ಸುರಿಯುವಂತಾಗುವುದಾದರೆ, ದೋಷದೃಷ್ಟಿಯು ಸಮದೃಷ್ಟಿಯಾಗಬಹುದು

99. ಸಂಪೂರ್ಣವಾಗಿ ಬ್ರಹ್ಮಚಾರಿಯಾಗಿರಬೇಕಾದವನು, ತನ್ನ ಬ್ರಹ್ಮಚರ್ಯಕ್ಕೆ ಭಂಗ ಬಂದೊದಗಬಹುದಾದ ಸನ್ನಿವೇಶಗಳ ಸಂಬಂಧಕ್ಕೆ ಎಂದೂ ಹೋಗಬಾರದು

100 ಮನೆಯು ಬಹುಕಾಲ ನಿಲ್ಲಲು ತಳಹದಿಯ ಬಲವೇ ಆಧಾರವಾಗುವಂತೆ, ಶರೀರದ ಬಲವು ಬಹುಕಾಲ ನಿಲ್ಲಲು ವೀರ್ಯರಕ್ಷಣೆಯೇ ಆಧಾರವಾಗಿರುತ್ತದೆ

## ಜ್ಞಾನ-ಶತಕ

1 ಮನುಷ್ಯಶರೀರವು ದೊರಕುವುದೇ ಬಹಳ ಕಷ್ಟ ಅದರಲ್ಲಿಯೂ ಮನುಷ್ಯತ್ವ ದೊರಕುವುದಂತೂ ಅತಿದುರ್ಲಭ.

2. ಮನುಷ್ಯತ್ವವು ಮೋಕ್ಷಕ್ಕೆ ಸಮಾನವಾಗಿ ಪವಿತ್ರವೂ, ಬೆಲೆಯುಳ್ಳುದೂ ಆಗಿದೆ

3. ಮನುಷ್ಯಸಹಜವಾದ ಆಚರಣೆಯಿಂದ ಮನುಷ್ಯತ್ವ ಉಂಟಾಗುತ್ತದೆ ಸಾಧುಸ್ವಭಾವ, ವಿನಯ, ದಯೆ ಮತ್ತು ನಿರಭಿಮಾನತೆ ಈ ಗುಣಗಳಿಲ್ಲದಿದ್ದರೆ, ಮನುಷ್ಯನಾಗಿದ್ದರೂ ನಾರಕಿ ಅಥವಾ ತಿರ್ಯಂಚಪ್ರಾಣಿಯ ಪ್ರತಿರೂಪವಾಗುತ್ತಾನೆ.

4 ಮನುಷ್ಯಜನ್ಮವು ಕೊನೆಯಿಲ್ಲದಷ್ಟುಬಾರಿ ದೊರಕಿದರೂ ಮನುಷ್ಯತ್ವ ಲಭಿಸುವುದು ಅತ್ಯಂತ ದುರ್ಲಭವಾಗಿದೆ

5 ಮನುಷ್ಯತ್ವಕ್ಕೆ ಯೋಗ್ಯವಾದ ಗುಣಗಳಿಲ್ಲದಿರುವುದಾದರೆ ಮನುಷ್ಯನು ಪಶುವಾಗುತ್ತಾನೆ ಪಶುಗಳಲ್ಲಿ ಮನುಷ್ಯತ್ವಕ್ಕೆ ತಕ್ಕ ಗುಣಗಳಿರುವುದಾದರೆ, ಅದು ಪಶುವಾಗಿದ್ದರೂ ಮನುಷ್ಯನಾಗುತ್ತದ.

6. ಮೋಹನಿದ್ರೆಯ ಸಾಮ್ರಾಜ್ಯವು ಮೂರುಲೋಕಗಳಲ್ಲಿಯೂ ಇರುತ್ತದೆ ಮೋಹವು ಮೂರುಲೋಕಗಳಲ್ಲಿಯೂ ರಾಜ್ಯಭಾರಮಾಡುತ್ತದೆ.

7 ಮೋಹವು ಆತ್ಮನಿಗೆ ಅಂಟಿದ ರೋಗವಾಗಿದೆ, ಮೋಹವಿಲ್ಲದಿರುವಿಕೆಯೇ ಆತ್ಮನ ಸ್ವಾಸ್ಥ್ಯ (ನಿರೋಗಸ್ಥಿತಿ—ಆರೋಗ್ಯ) ವಾಗಿದೆ.

8 ಒಂದು ಒರೆಯಲ್ಲಿ ಎರಡು ಕತ್ತಿಗಳು ಹೇಗೆ ಸೇರಿರಲಾರವೋ ಹಾಗೆಯೇ ಶರೀರಾಭಿಮಾನ ಮತ್ತು ಆತ್ಮಜ್ಞಾನಗಳೆರಡೂ ಒಂದೆಡೆಯಲ್ಲಿರ ಲಾರವು.

9 ಶರೀರಸಂಬಂಧವಾದ ಹೊಳಪು (ದೇಹಾಭಿಮಾನ) ಮರೆತುಹೋ ದರೇನೆ, ಆತ್ಮಜ್ಞಾನ ಉಂಟಾಗುವುದು

10 ನಿದ್ರೆ ಬಂದಮೇಲೆ ದೇಹದಮೇಲಿನ ಅಭಿಮಾನವು ಮರೆತು ಹೋಗುತ್ತದೆ ಶರೀರದ ಕ್ರಾಂತಿ (ಪರಿಶ್ರಮದಿಂದಾಗುವ ಸುಸ್ತು) ಯು ಪರಿ ಹಾರವಾಗುತ್ತದೆ ಅದರಂತೆ ಶರೀರಾಭಿಮಾನ ಮರೆತುಹೋಗುವುದರಿಂದ ಆತ್ಮಜ್ಞಾನದಶೆಯು (ಮೋಹದಿಂದ ಆವೃತವಾಗಿ ಮರೆಯಾಗಿದ್ದ ಆತ್ಮಜ್ಞಾನದ ಸ್ಥಿತಿ) ಜಾಗ್ರತವಾಗುತ್ತದೆ (ಎಚ್ಚರಗೊಳ್ಳುತ್ತದೆ) ಮತ್ತು ಅನಂತಕಾಲದಿಂದ ಅಂಟಿಬಂದಿರುವ ಕರ್ಮಗಳ ಭಾರವು ಹಗುರವಾಗಿ ಆತ್ಮನು ಶುದ್ಧನಾಗುತ್ತಾನೆ

11 ಪಶುಗಳು ಹಿತಾಹಿತಗಳನ್ನು ವಿಚಾರಮಾಡಿ ತಿಳಿಯಲಾರವು ಅದೇರೀತಿಯಲ್ಲಿ ಅಜ್ಞಾನಿಯೂ ಪಶುವಿನಂತೆ ಜೀವನವನ್ನು ನಾಗಿಸುತ್ತಾ ಆತ್ಮಘಾತವನ್ನುಂಟುಮಾಡಿಕೊಳ್ಳುತ್ತಾನೆ

12 ಸದ್ವಿಚಾರಗಳೊಡನೆ ಸದಾಚಾರವನ್ನು ಇಟ್ಟುಕೊಳ್ಳದಿರುವುದು ಆತ್ಮವಂಚನೆಯಾಗುತ್ತದೆ

13 ಜ್ಞಾನದ ಸಂಬಂಧವಾಗಿ ಮಾತನಾಡುವವರು ಬಹುಮಂದಿ, ಆದರೆ ವಿಚಾರಕ್ಕೆ ತಕ್ಕ ಆಚರಣೆಯುಳ್ಳವರು ಬಹಳ ವಿರಳ

14 ತತ್ವಗಳಲ್ಲಿ ವಿಶ್ವಾಸವಿಡುವುದೇ ಸಮ್ಯಗ್ದರ್ಶನ (ಆತ್ಮದರ್ಶನ) ವಾಗಿದೆ

15 ತತ್ವಗಳ ಸಂಬಂಧವಾದ ಸಂಪೂರ್ಣವಾದ ತಿಳುವಳಿಕೆಯೇ ಸಮ್ಯಕ್-ಜ್ಞಾನವಾಗಿದೆ

16 ಕ್ರೋಧಾದಿ ಕಷಾಯಗಳ ನಿವೃತ್ತಿ (ಬಿಡುವಿಕ) ಯೇ ಸಮ್ಯ ಕ್ಚಾರಿತ್ರವಾಗಿದೆ.

17 ಸಮತಾಭಾವವು ಬೆಳ್ದಿಂಗಳಿಗಿಂತಲೂ ತಂಪಾಗಿದೆ ಮತ್ತು ಕ್ರೋಧಾದಿ ಕಷಾಯಭಾವಗಳು ಬೆಂಕಿಗಿಂತಲೂ ಭಯಂಕರವಾಗಿವೆ

18 ಪಂಚೇಂದ್ರಿಯವಿಷಯಗಳ ಮತ್ತು ಕ್ರೋಧಾದಿ ಕಷಾಯಗಳ ಸಂಬಂಧವಾದ ಮಾತುಕತೆಗಳು ವಕ್ತೃ ಮತ್ತು ಶ್ರೋತೃ (ಹೇಳುವವನು

ಮತ್ತು ಕೇಳುವವನು) ಗಳಿಬ್ಬರನ್ನೂ ನರಕಕ್ಕೆಳೆದೊಯ್ಯುತ್ತವೆ, ಎಂದು ಹೇಳಿದಮೇಲೆ ವಿಷಯ ಕಷಾಯಗಳಿಗೆ ವಶೀಭೂತರಾಗಿ ನಡೆಯುವವರ ಸ್ಥಿತಿ ಏನಾಗುತ್ತದೆಯೋ?

19. ಸಂತೋಷವುಳ್ಳವನು (ಸಂಪೂರ್ಣತೃಪ್ತಿಯುಳ್ಳವನು–ಯಾವಾಗಲೂ ಪ್ರಸನ್ನನಾಗಿರುವವನು) ಲೋಕವನ್ನು ಪವಿತ್ರಗೊಳಿಸುವ ಆದರ್ಶವಾಗಿರುತ್ತಾನೆ

20. ಸಂತೋಷವುಳ್ಳವನು ಸಂಸಾರಸಮುದ್ರವನ್ನು ದಾಟಿಹೋಗುತ್ತಾನೆ ಲೋಭಿಯಾದವನು ಸಂಸಾರಸಮುದ್ರದಲ್ಲಿ ಮುಳುಗಿಹೋಗುತ್ತಾನೆ.

21 ಸಮತಾಭಾವವುಳ್ಳವನು ಸಮುದ್ರದಂತೆ ಗಂಭೀರನಾಗಿರುತ್ತಾನೆ. ಗುಣಗಳೆಂಬ ನದಿಗಳು ಬಂದು ಸೇರುತ್ತವೆ

22. ಕ್ರೋಧಾದಿ ಕಷಾಯಗಳು–ಎಲ್ಲಾ ಸದ್ಗುಣಗಳೆಂಬ ಚಂದನಾದಿ ವೃಕ್ಷಗಳನ್ನು ಸುಟ್ಟು ಭಸ್ಮಮಾಡುವ–ಕಾಳ್ಗಿಚ್ಚಾಗಿದೆ

23 ಸಮತಾಭಾವವುಳ್ಳವನನ್ನು ದೇವತೆಗಳೂ ನಮಸ್ಕರಿಸುತ್ತಾರೆ

24 ಎಲ್ಲಾ ಪಾಪಗಳ ಮೂಲವು ಕಷಾಯವೊಂದೇ ಆಗಿದೆ.

25. ಕ್ರೋಧಾದಿ ಕಷಾಯಗಳು ನರಕನಿಗೋದಗಳಿಗಿಳಿಯುವ ನಿಚ್ಚಣಿಕೆ (ಏಣಿ) ಯಾಗಿದೆ.

26 ಕ್ರೋಧಾದಿ ಕಷಾಯಗಳು ಕೋಟಿಪೂರ್ವಕಾಲಮಾಡಿದ ತಪಸ್ಸನ್ನೂ ಹಾಳುಮಾಡುತ್ತವೆ

27 ಕ್ರೋಧಾದಿ ಕಷಾಯದೂಷಿತನಾದವನು ತಾನೂ ಸುಟ್ಟುಹೋಗಿ ಇತರರನ್ನೂ ಸುಡುತ್ತಾನೆ

28. ಪಂಚೇಂದ್ರಿಯಗಳು ಮತ್ತು ಕ್ರೋಧಾದಿ ಕಷಾಯಗಳು ಹಾಲಾಹಲವೆಂಬ ಘೋರವಿಷಕ್ಕಿಂತಲೂ ಭಯಂಕರವಾಗಿವೆ

29 ಪಂಚೇಂದ್ರಿಯ ಮತ್ತು ಕಷಾಯಗಳ ಸಂಬಂಧವಾದ ವಿಚಾರಮಾತ್ರದಿಂದಲೇ ಜೀವನು ನರಕಕ್ಕ ಹೋಗುವನೆಂದಮೇಲೆ ವಿಷಯಕಷಾಯರೂಪವಾದ ಆಚರಣೆಯುಳ್ಳವನಿಗೆ ಏನಾಗಬಹುದೋ?

30. ಅನಂತಕಾಲದವರೆಗೆ ವಿಷಯಕಷಾಯಗಳ ಸೇವನೆಮಾಡಿದ ಬಳಿಕವೂ ಜೀವನು ತೃಪ್ತನಾಗಿಲ್ಲ ಮತ್ತು ಆಗುವುದೂ ಇಲ್ಲ.

31 ಪಂಚೇಂದ್ರಿಯ ಮತ್ತು ಕಷಾಯಗಳ ರಾಜ್ಯಭಾರ (ಆಧಿಪತ್ಯ)ವು ಮೂರು ಲೋಕಗಳನ್ನೂ ವ್ಯಾಪಿಸಿಕೊಂಡಿದೆ

32. ಅಜ್ಞಾನಿಗಳು, ಪಂಚೇಂದ್ರಿಯ ವಿಷಯಗಳು ಮತ್ತು ಕ್ರೋಧಾದಿ ಕಷಾಯಗಳೆಂಬ ಕಾಳ್ಗಿಚ್ಚಿನಲ್ಲಿ ಶೈತ್ಯ (ಶಾಂತಿ) ವನ್ನು ಹುಡುಕುತ್ತಾ ಪತಂಗದಂತೆ ಸುಟ್ಟು ಬೂದಿಯಾಗುತ್ತಾರೆ

33. ಅನಂತಜ್ಞಾನಿಯಾದ ಜಿನೇಶ್ವರನಿಂದ ಪಂಚೇಂದ್ರಿಯವಿಷಯ ಮತ್ತು ಕಷಾಯಗಳು ದುಷ್ಟವಸ್ತುಗಳೆಂದು ನಿಂದಿಸಲ್ಪಟ್ಟಿದ್ದರೂ, ಅಜ್ಞಾನಿಯು ಅವುಗಳನ್ನು ಪವಿತ್ರವಾದವುಗಳೆಂದು ತಿಳಿಯುತ್ತಾನೆ

34. ಪಂಚೇಂದ್ರಿಯಗಳು ಮತ್ತು ಕ್ರೋಧಾದಿ ಕಷಾಯಗಳಿಗೆ ಆಧೀನನಾದ ಜೀವನು ಲೋಕಕ್ಕೇ ಗುಲಾಮ (ಕ್ರಯಕ್ಕೆ ಕೊಂಡ ಸೇವಕ) ನಾಗಿರುತ್ತಾನೆ

35 ಅಜ್ಞಾನಿಗಳನ್ನು ಪಂಚೇಂದ್ರಿಯ ಮತ್ತು ಕ್ರೋಧಾದಿ ಕಷಾಯಗಳೆಂಬ ಭೂತಗಳು ಹಿಡಿದಿರುತ್ತವೆ.

36. ಪಂಚೇಂದ್ರಿಯ ಮತ್ತು ಕ್ರೋಧಾದಿ ಕಷಾಯಗಳು ಅನಂತವಾದ (ಅಪಾರವಾದ) ಪುಣ್ಯವನ್ನು ನಾಶಮಾಡುತ್ತವೆ

37 ಕ್ರೋಧಾದಿ ಕಷಾಯಗಳು ಆತ್ಮಧರ್ಮ (ಆತ್ಮನ ಸಹಜವಾದ ಗುಣಗಳು) ವನ್ನು ನಾಶಮಾಡುತ್ತವೆ

38 ಸಮತಾಭಾವವೆಂಬ ಶಾಂತಿಸರೋವರದಲ್ಲಿ ಸ್ನಾನಮಾಡಿ.

39 ನಮ್ಮ ದೋಷಗಳನ್ನು ಎತ್ತಿ ತೋರಿಸುವವನೇ ನಮ್ಮ ಸ್ನೇಹಿತನಾಗುತ್ತಾನೆ ಅಂತಹವನಮೇಲೆ ಕೋಪಮಾಡುವುದೇಕ? ಜ್ಞಾನಿಯಾದವನು ಹೀಗೆಂದು ವಿಚಾರಮಾಡುತ್ತಾನೆ

40. ಕೋಪಮಾಡುವವನು ಇತರರಿಗೂ ಕೋಪಮಾಡುವುದನ್ನು ಕಲಿಸುತ್ತಾನೆ

41. ಕ್ರೋಧವನ್ನು ಜಯಿಸಲಾರದೇ ಹೋಗುವುದಾದರೆ, ಜ್ಞಾನದಿಂದ ಪ್ರಯೋಜನವೇನು ?

42. ಚಂದನವೃಕ್ಷವು ಕತ್ತರಿಸುವವನಿಗೂ, ಕತ್ತರಿಸುವ ಕೊಡಲಿಗೂ ಸುಗಂಧವನ್ನು ಕೊಡುತ್ತದ ಕೋಪಮಾಡುವವನಿಗೆ ನಾನೇನನ್ನು ಕೊಡಲಿ?

43. ತನಗೆ ಅಹಿತ (ತೊಂದರೆ) ವನ್ನುಂಟುಮಾಡಿಕೊಂಡಾದರೂ ನನ್ನನ್ನು ಉತ್ತಮಸ್ಥಿತಿಗೆ ತರಲು ಪ್ರಯತ್ನಪಡು (ಶ್ರಮಿಸು) ವವನ ಉಪಕಾರ ವನ್ನು ನಾನು ಹೇಗೆತಾನೇ ಮರೆಯಬಲ್ಲೆ ? ಉಪಕಾರವನ್ನು ಸ್ಮರಿಸದಿರು ವುದು ಪಾಮರತ್ವ (ದುಷ್ಟತನ) ವಾಗಿದೆ.

44 ಜ್ಞಾನಜ್ಯೋತಿಯಲ್ಲಿ ತನ್ಮಯತೆ (ಸೇರಿಹೋಗು) ಯೇ ಭಾವ ನಿಪ್ರಯಾಗಿದೆ.

45 ಚೈತನ್ಯದ ಅಸ್ತಿತ್ವದಲ್ಲಿ ತಲ್ಲೀನನಾಗಿರುವಿಕೆಯೇ (ಆತ್ಮಚಿಂತನೆ ಯಲ್ಲಿ ಮಗ್ನನಾಗುವುದೇ) ಮೋಕ್ಷದ ಮಾರ್ಗವಾಗಿದೆ

46 ಸ್ವಸ್ವರೂಪದಲ್ಲಿ ಲೀನರಾಗುವವರೇ (ಆತ್ಮಧ್ಯಾನದಲ್ಲಿ ನಿರತರಾ ಗುವವರೇ) ಸ್ವಾಧೀನರಾಗಿರುವವರು ; ಉಳಿದವರೆಲ್ಲರೂ ಪರಾಧೀನರು ಮತ್ತು ಅನಂತಸಂಸಾರಿಗಳು

47. ಆತ್ಮನಲ್ಲಿ ಲೀನನಾಗಿ ಆನಂದಾನುಭವಮಾಡುವುದೇ ಜೀವನ ಮುಕ್ತದೆಶೆಯಾಗಿದೆ.

48. ಜ್ಞಾನದರ್ಶನಗಳ ಫಲವೇ ಚಾರಿತ್ರ, ಚಾರಿತ್ರದ ಫಲವೇ ನಿರ್ವಾಣ ( ಮೋಕ್ಷ) ಇದೇ ಆತ್ಮಸ್ವಭಾವ.

49 ಸ್ವಲ್ಪವಯಸ್ಸಿನವನು ವ್ಯವಹಾರ (ವ್ಯಾಪಾರಾದಿ ಕಾರ್ಯಕ್ರಮ) ದಲ್ಲಿ ತಿಳುವಳಿಕಯಿಲ್ಲದ ಮಗುವಿನಂತಿರುವನು. ಅಜ್ಞಾನಿಯಾದವನು ಪ್ರಾಯದವನಾಗಿದ್ದರೂ, ಮುದುಕನಾಗಿದ್ದರೂ ವ್ಯವಹಾರದಲ್ಲಿ ಸಣ್ಣ ಮಗುವೇ ಆಗುತ್ತಾನೆ.

50 ರೋಗಬಂದಾಗ ರುಚಿಯಿಲ್ಲದ (ಕಹಿಯಾದ) ಔಷಧಿಯನ್ನು ಕುಡಿಯುವುದರಲ್ಲಿ ಯಾವ ವಿಧವಾದ ಉದಾಶೀನತೆಯಿರುತ್ತದೆಯೋ ಅದೇ ರೀತಿ ಜ್ಞಾನಿಯಾದವನು ಯಾವಾಗಲೂ ಪಾನಭೋಜನಗಳಲ್ಲಿ ಉದಾಶೀನ ನಾಗಿರುತ್ತಾನೆ

51. ವಿಷಯ ಕಷಾಯಗಳ ವಶನಾದವನು ವೇಷಧಾರಿಯಂತೆ–ಸಾಧು ಅಥವಾ ಗೃಹಸ್ಥನ ವೇಷವನ್ನು ಹಾಕಿಕೊಂಡಿರುತ್ತಾನೆ.

52. ವಿಷಯಕಷಾಯಗಳು ಆತ್ಮನಿಗೆ ಕುಪಥ್ಯ (ಹಿತವಲ್ಲದ) ಭೋಜ ನವಾಗಿದೆ

53 ಹೆಣದ ಕೈಯಲ್ಲಿರುವ ಶಕ್ತಿಯಂತೆ ಜ್ಞಾನಿಯಾದವನು ಜ್ಞಾನದ ಉಪಯೋಗವನ್ನು ಹೊಂದದೇ ಹೋದರೆ ಆ ಜ್ಞಾನವು ನಿರರ್ಥಕ (ಪ್ರಯೋಜನವಿಲ್ಲದ್ದು) ವಾಗುತ್ತದೆ.

54 ಕತ್ತೆಗೆ ಸುವಾಸನೆಯುಳ್ಳ ಚಂದನ (ಶ್ರೀಗಂಧ) ವೂ ಭಾರವಾಗಿ ತೋರುವಂತೆ, ಚಾರಿತ್ರ (ಸದಾಚಾರ) ಹೀನನಾಗಿರುವವನಿಗೆ ಜ್ಞಾನಸಂಬಂಧವಾದ ಮಾತುಗಳೂ ಭಾರವಾಗಿ ಕಾಣುತ್ತವೆ

55. ಪಂಚೇಂದ್ರಿಯಸುಖ ಮತ್ತು ಕ್ರೋಧಾದಿ ಕಷಾಯಗಳಿಂದ ಕೂಡಿದವನು ಜ್ಞಾನದರ್ಶನಗಳೆಂಬ ಕಣ್ಣುಗಳೆರಡನ್ನೂ ಒಡೆದುಕೊಂಡು ಕುರುಡನಾಗಿಹೋಗಿರುತ್ತಾನೆ.

56 ಪರಿಗ್ರಹ (ಶರೀರ, ಪುತ್ರ, ಮಿತ್ರ, ಕಳತ್ರ ಮೊದಲಾದವು) ಗಳು ವೃದ್ಧಿಯಾಗುವುದರಿಂದ ಆರಂಭ, ಪಂಚೇಂದ್ರಿಯಸುಖ ಮತ್ತು ಕ್ರೋಧಾದಿ ಕಷಾಯಗಳು ವೃದ್ಧಿಯಾಗುತ್ತವೆ

57 ಹೇಗೆ ಬೆಕ್ಕು ಇಲಿಯನ್ನು ತಿನ್ನುವುದರಲ್ಲಿ ಪಾಪವನ್ನು ತಿಳಿಯುವುದಿಲ್ಲವೋ, ಹಾಗೆಯೇ ಅಜ್ಞಾನಿಯಾದವನು ಪರಿಗ್ರಹ, ವಿಷಯಸುಖ ಮತ್ತು ಕ್ರೋಧಾದಿಗಳಲ್ಲಿ ಪಾಪವನ್ನು ತಿಳಿಯುವುದಿಲ್ಲ

58 ಸಂಸಾರದಲ್ಲಿ ಸುಖವಿಲ್ಲವೇ ಇಲ್ಲ ಹಸಿವು ಬಾಯಾರಿಕೆಗಳು ರೋಗಗಳಾಗಿವೆ ಭೋಜನಪಾನಗಳೇ ಈ ರೋಗಗಳಿಗೆ ಔಷಧಿಗಳಾಗಿವೆ ಅಜ್ಞಾನಿಯಾದವನು ಈ ರೋಗಗಳನ್ನೇ ಭೋಗಗಳೆಂದು ತಿಳಿಯುತ್ತಾನೆ

59. ಯಾವಾಗಲೂ ನಾನಾವಿಧವಾದ ಕೆಟ್ಟ ಮತ್ತು ಅನುಪಾದೇಯವಾದ (ಸ್ವೀಕಾರಯೋಗ್ಯವಲ್ಲದ) ಕಾರ್ಯಗಳನ್ನು ಮಾಡುತ್ತಾ ತನ್ನ ಜ್ಞಾನವನ್ನು ದುರುಪಯೋಗಮಾಡಿಕೊಳ್ಳಬಾರದು

60 ಆತ್ಮೋನ್ನತಿಗೆ (ಆತ್ಮನ ಗುಣಗಳನ್ನು ಹೆಚ್ಚಿಸಿಕೊಳ್ಳುವಿಕೆ) ಸಚ್ಚಾರಿತ್ರವು (ಸದಾಚಾರ) ಸಾಧನವಾಗಿದೆ ಇದಿಲ್ಲದ ಹೊರತು ಯಾರೂ ಶ್ರೇಷ್ಠರಾಗಲಾರರು. ಲೋಕಾಚಾರಕ್ಕಿಂತಲೂ ಸದಾಚಾರಕ್ಕೆ ಹೆಚ್ಚು ಮಹತ್ವ (ಆದರ) ವನ್ನು ಕೊಡಬೇಕು

61 ಒಳ್ಳೆಯದನ್ನು ಮಾಡುವುದರಲ್ಲಿ ಹೆಚ್ಚು ಅನುರಾಗ (ಪ್ರೀತಿ) ವನ್ನು ತೋರಿಸು. ಅನುರಾಗವನ್ನು ಹೆಚ್ಚಿಸಿಕೊಳ್ಳಬೇಡ

62. ಮಧುರವಾದ ಮಾತೇ ವಶೀಕರಣಮಂತ್ರ.

63. ಸ್ವರ್ಗಮೋಕ್ಷಗಳು ಪ್ರಕೃತಿ (ಸ್ವಭಾವಸಹಜವಾದ ಪರಿಣಾಮ ಅಥವಾ ಪ್ರವೃತ್ತಿ) ಯ ಕಾಲಡಿಯಲ್ಲೇ ಇವೆ ಆ ಪ್ರಕೃತಿಯನ್ನು ನಿನ್ನದಾಗಿ ಮಾಡಿಕೋ

64 ನಿನಗೆ ಹೇಗಾಗಬೇಕೆಂದು ಇಚ್ಛಿಸುವೆಯೋ ಇತರರ ವಿಚಾರ ದಲ್ಲಿಯೂ ಹಾಗೆಂದೇ ತಿಳಿ.

65. ಯಾರ ಅಂತಃಕರಣ (ಮನಸ್ಸಿನ ಪರಿಣಾಮ) ವು ಪವಿತ್ರವಾಗಿ ದೆಯೋ ಅವನೇ ಧನ್ಯನು (ಪುಣ್ಯವಂತ–ಪ್ರಶಂಶನೀಯ) ಅಂತಹವನೇ ಆತ್ಮನನ್ನು ಹಾಗೂ ಪರಮಾತ್ಮನನ್ನು ನೋಡುವವನಾಗುವನು

66 ಸತ್ಸಂಗತಿಯೇ (ಒಳ್ಳೆಯವರ ಸಹವಾಸ–ಸೇರುವಿಕೆ–ಸ್ನೇಹ) ಎಲ್ಲಾ ಗುಣಗಳನ್ನೂ ಉಂಟುಮಾಡತಕ್ಕುದಾಗಿದೆ.

67 ಒಬ್ಬನು ಭೋಗವನ್ನನುಭವಿಸುತ್ತಿದ್ದರೂ, ಕರ್ಮಗಳನ್ನು ಹೆಚ್ಚಿಸಿ ಕೊಳ್ಳುವುದಿಲ್ಲ, ಮತ್ತೊಬ್ಬನು ಭೋಗವನ್ನನುಭವಿಸುತ್ತಿಲ್ಲದಿದ್ದರೂ ಕರ್ಮ ಗಳನ್ನು ಹೆಚ್ಚಿಸಿಕೊಳ್ಳುತ್ತಾನೆ ಇದು ಆಶ್ಚರ್ಯಕರವಾಗಿದೆ, ಆದರೂ ತಿಳಿಯಬೇಕಾದ ಮಾತಾಗಿದೆ

68 ನಾವಿರಗಟ್ಟಲೆ ಉಪದೇಶದ ಮಾತುಗಳನ್ನು ಕೇಳುವುದಕ್ಕಿಂ ತಲೂ ಕೇಳಿದ ಕೆಲವೇ ಮಾತುಗಳನ್ನು ಮನಸ್ಸಿನಲ್ಲಿ ವಿಚಾರಮಾಡಿ ಯಥಾ ಶಕ್ತಿ ಅದರಂತೆ ಆಚರಿಸುವುದು ಹೆಚ್ಚು ಹಿತಕಾರಿಯಾಗಿರುತ್ತದೆ.

69 ಯಾವ ಕಾರ್ಯದ ಕೊನೆಯಲ್ಲಿ ದುಃಖವಿದೆಯೋ ಅಂತಹ ಕಾರ್ಯವನ್ನು ಆದರಿಸುವುದಕ್ಕೆ ಮೊದಲು ಚನ್ನಾಗಿ ವಿಚಾರಮಾಡು

70 ಓದುವುದಕ್ಕಿಂತಲೂ ಮನಸ್ಸಿನಲ್ಲಿ ಗ್ರಹಿಸಿ ತಿಳಿದುಕೊಳ್ಳುವುದಕ್ಕೆ ಹೆಚ್ಚುಗಮನಕೊಡಬೇಕು.

71 ಜ್ಞಾನಿಗಳ ಮೂಲಕ ಕೂಡಿಟ್ಟ ಅದ್ಭುತವಾದ ನಿಧಿಯನ್ನು ಉಪ ಯೋಗಿಸುವವನಾಗು (ಜ್ಞಾನಿಗಳ ಸಹವಾಸದಲ್ಲಿದ್ದು ಸದ್ಗುಣಗಳನ್ನು ಸಂಪಾದಿಸಿ ಸುಖವನ್ನನುಭವಿಸು–ಎಂದು ಭಾವ)

72 ಸ್ತ್ರೀಜಾತಿಯಲ್ಲಿ ಎಷ್ಟು ಮೋಸ ವಂಚನೆಗಳಿವೆಯೋ ಅಷ್ಟೇ ಸರಳತೆಯೂ ಇದೆ.

73. ಮಹಾಪುರುಷರ ಆಚರಣೆಗಿಂತಲೂ ಹೆಚ್ಚಾಗಿ ಅವರ ಅಂತಃ

ಕರಣ (ಪರಿಣಾಮ) ವನ್ನು ಪರಿಶೀಲಿಸಿ ನೋಡುವುದು ಉತ್ತಮವಾಗಿದೆ.

74 ಮಹಾತ್ಮನಾಗಬೇಕೆಂದಿದ್ದರೆ–ಉಪಕಾರಮಾಡುವುದನ್ನು ಹೆಚ್ಚಿಸಿಕೊ ಸತ್ಪುರುಷರ ಸಹವಾಸದಲ್ಲಿರು ಆಹಾರ ವಿಹಾರಗಳಲ್ಲಿ ಅತ್ಯಾಶೆಪಡದೆ ನಿಯಮವುಳ್ಳವನಾಗಿರು. ಉತ್ತಮವಾದ ಶಾಸ್ತ್ರವನ್ನು ಓದಿ ತಿಳಿದುಕೊ ಮತ್ತು ಮೇಲೆಮೇಲಿನ ಹಂತಕ್ಕೇರುವುದರಕಡೆಗೆ ಲಕ್ಷ್ಯವಿಡು

75. ಮೊದಲಿಂದಲಂತೂ ಪ್ರೀತಿಮಾಡೇಯಿಲ್ಲದಿದ್ದರೂ, ಪ್ರೀತಿಮಾಡಲೇಬೇಕಾದಾಗ ಸತ್ಪುರುಷರನ್ನು ಪ್ರೀತಿಸು, ಇದೇರೀತಿ ಮೊದಲಿಂದ ದ್ವೇಷಮಾಡೇಯಿಲ್ಲದಿದ್ದರೂ, ದ್ವೇಷಮಾಡಲೇಬೇಕಾದಾಗ ದುಷ್ಟಭಾವನೆಗಳನ್ನು ದ್ವೇಷಿಸು.

76 ಯಾವನು ಮನಸ್ಸನ್ನು ವಶಮಾಡಿಕೊಳ್ಳುವನೋ ಅವನು ಜಗತ್ತನ್ನೇ ಸ್ವಾಧೀನಮಾಡಿಕೊಳ್ಳುವನು

77. ನಿರ್ಗ್ರಂಥತೆಯನ್ನು (ಶರೀರಾದಿ ಪರಿಗ್ರಹಗಳ ಕಟ್ಟಿನಿಂದ ಬಿಡುಗಡೆಮಾಡಿಕೊಳ್ಳುವಿಕೆ) ಸ್ವೀಕರಿಸುವುದಕ್ಕೆಮೊದಲು ಚೆನ್ನಾಗಿ ವಿಚಾರಮಾಡಬೇಕು ನಿರ್ಗ್ರಂಥತೆಯನ್ನು ಸ್ವೀಕರಿಸಿ ಬಳಿಕ ಕಡಿಸಿಕೊಳ್ಳುವುದಕ್ಕಿಂತಲೂ ಅಲ್ಪಾರಂಭಿಯಾಗುವುದು (ಪರಿಗ್ರಹಗಳನ್ನು ಕಡಮೆಮಾಡಿಕೊಳ್ಳುವಿಕ) ಒಳ್ಳೆಯದು

78 ಸ್ತ್ರೀಯರ ಸೌಂದರ್ಯ (ಮನೋಹರವಾದ ಸ್ವರೂಪು) ದಮೇಲೆ ಉಂಟಾಗುವ ಮೋಹವನ್ನು ತಡೆಗಟ್ಟುವುದಕ್ಕಾಗಿ, ಚರ್ಮರಹಿತವಾದ ದೇಹದ ಸ್ವರೂಪವನ್ನು ಕುರಿತು ಪದೇಪದೇ ಚಿಂತಿಸುವುದು ಒಳ್ಳೆಯದು

79 ಯಾವ ವಸ್ತುವಿನಮೇಲೂ ಪ್ರೀತಿಯನ್ನಿಡಬಾರದು. ಹಾಗೆ ಪ್ರೀತಿಸಲೇಬೇಕಾದರೆ ಜಗತ್ತನ್ನೇ ಪ್ರೀತಿಸು

80. ಭೋಗಗಳನ್ನು ಅನುಭವಿಸುವಾಗ ಯೋಗದ ಸ್ಮರಣೆ (ಜ್ಞಾಪಕ) ಉಂಟಾಗುವುದು ಲಘುಕರ್ಮಿಯ (ಸ್ವಲ್ಪಕರ್ಮವುಳ್ಳವನ) ಲಕ್ಷಣವಾಗಿದ

81. ಇಷ್ಟು ವಸ್ತುಗಳು ಲಭಿಸುವುದಾದರೆ ನಾನು ಮೋಕ್ಷವನ್ನು ಅಪೇಕ್ಷಿಸುವುದಿಲ್ಲ —ಲೋಕಕ್ಕೆಲ್ಲಾ ಉತ್ತಮಸ್ವಭಾವ, ಪ್ರವೃತ್ತಿಯಲ್ಲಿ ಆದರ, ನಿಯಮಿತವಾದ ಆಯುಸ್ಸು, ರೋಗವಿಲ್ಲದ ಶರೀರ, ಅತಿಶಯವಾಗಿ ಪ್ರೀತಿಸುವ ಸುಂದರಿಯಾದ ಹೆಂಡತಿ, ಅಪ್ಪಣೆಯಂತೆ ನಡೆಯುವ ಸೇವಕರು, ವಂಶಕ್ಕೆ ಕೀರ್ತಿಯನ್ನುತರುವ ಮಗ, ಸಾಯುವವರೆಗೂ ಕುಂದದ ತಾರುಣ್ಯ–ಯೌವನ

ಮತ್ತು ಆತ್ಮತತ್ವಜ್ಞಾನ (ಆತ್ಮಸ್ವರೂಪದ ತಿಳುವಳಿಕೆ) ಹೀಗೆಂದೂ ಆಗುವುದಿಲ್ಲ (ಇಷ್ಟ ವಸ್ತುಗಳೂ ಲಭಿಸುವ ಸಂಭವವಿಲ್ಲ) ಆದುದರಿಂದಲೇ ನಾನು ಮೋಕ್ಷವನ್ನು ಅಪೇಕ್ಷಿಸುತ್ತಿದ್ದೇನೆ

82. ಜ್ಞಾನಿಜನರ ಅಂತರಂಗ (ಮನಸ್ಸಿನ ಪರಿಣಾಮ) ವು ದುಃಖ ರಹಿತವೂ, ಈರ್ಷಾರಹಿತವೂ ಆಗಿರುತ್ತದೆ (ಈರ್ಷೆ=ಹೊಟ್ಟೆಕಿಚ್ಚು)

83 ಉತ್ತಮವಾದ ವಸ್ತುಗಳ ಸಂಬಂಧವಾಗಿ ಜಿಜ್ಞಾಸೆಮಾಡುವುದು (ಜ್ಞಾನವನ್ನು ಪಡೆಯುವ ಇಚ್ಛೆ) ಆತ್ಮನ ಶ್ರೇಷ್ಠತ್ವವಾಗಿದೆ ಒಂದುವೇಳೆ ಇಂತಹ ಜಿಜ್ಞಾಸೆಯು ಪೂರ್ಣವಾಗಲಾರದೇಹೋದರೂ, ಆ ಜಿಜ್ಞಾಸೆಯೇ ಆತ್ಮನ ಶ್ರೇಷ್ಠತ್ವದ ಭಾಗದಂತಿದೆ

84 ಹೊಸದಾಗಿ ಕರ್ಮಗಳ ಬಂಧವನ್ನುಂಟುಮಾಡಿಕೊಳ್ಳದೆ, ಹಳೆಯ ಕರ್ಮಗಳನ್ನು ಅನುಭವಿಸಿಬಿಡಬೇಕು ಹೀಗೆಂದು ಯಾರು ಸ್ಥಿರವಾದ ನಂಬಿಕೆಯುಳ್ಳವರಾಗಿರುವರೋ ಅವರು ಹಾಗೆಯೇ ಆಚರಿಸಬಲ್ಲವರಾಗುತ್ತಾರೆ.

85 ಆತ್ಮಸಿದ್ಧಿಯ ದಾರಿ ತಿಳಿದುಬಂದುಬಿಡುವುದಾದರೆ, ಈ ಜೀವನದ ಒಂದೊಂದುಕ್ಷಣಕಾಲವೂ ಸರ್ವೋತ್ಕೃಷ್ಟವಾದ ಚಿಂತಾಮಣಿ (ಇಷ್ಟಾರ್ಥವನ್ನು ಕೊಡುವ ರತ್ನ) ಯಾಗುತ್ತದೆ ಇದರಲ್ಲಿ ಸಂಶಯವಿಲ್ಲ

86. ಸ್ವದ್ರವ್ಯಕ್ಷೇತ್ರಕಾಲಭಾವರೂಪವಾದ ಪ್ರವೃತ್ತಿಯುಳ್ಳವನಾಗುವುದೇ ನಿರ್ಗ್ರಂಥ–ಅಪ್ರತಿಬಂಧಭಾವವಾಗಿದೆ ಇದನ್ನು ಕುರಿತು ಹೆಚ್ಚಾಗಿ ಅನುಪ್ರೇಕ್ಷ (ಸದಾ ಅದನ್ನೇ ಕುರಿತು ಚಿಂತಿಸುವಿಕೆ) ಮಾಡುವುದು ಯೋಗ್ಯವಾಗಿದೆ

87. ಯಾವಕಾರ್ಯವನ್ನು ಮಾಡುವುದರ ಫಲವು ಧರ್ಮರೂಪವಾಗುವುದಿಲ್ಲವೋ, ಅಂತಹ ಕಾರ್ಯವನ್ನು ಮಾಡುವ ಇಚ್ಛೆಯು ಮನಸ್ಸಿನಲ್ಲಿ ಹುಟ್ಟಲು ಪ್ರಾರಂಭದಿಂದಲೂ ಎಡೆಗೊಡುವುದು ಯೋಗ್ಯವಲ್ಲ

88 ಜೀವಾಜೀವದ್ರವ್ಯಗಳ ಸಂಬಂಧವಾದ ಜ್ಞಾನವು (ತಿಳುವಳಿಕೆ) ದ್ರವ್ಯ, ಕ್ಷೇತ್ರ ಕಾಲ ಮತ್ತು ಭಾವ ಇವುಗಳಿಂದ ಸಂಪೂರ್ಣವಾಗಿ ಉಂಟಾಗಬಲ್ಲುದಾಗಿದೆ

89 ನೀನು ಯಾವ ವಿಷಯವನ್ನೂ ಸರಿಯಾಗಿ ತಿಳಿದುಕೊಳ್ಳಲಾರದೇ ಹೋದರೂ, ವಿಷಯವನ್ನು ಕಿವಿಯಿಂದ ಕೇಳುವ ಅಭ್ಯಾಸಮಾಡು ಇದರಿಂದೆಷ್ಟನ್ನು ಗ್ರಹಿಸಬಲ್ಲೆಯೋ ಅಷ್ಟನ್ನೇ ತಿಳಿದುಕೊ

90 ಯಾವನು ತನ್ನ ಬಾಹ್ಯವೈಭವದಿಂದ (ಧನಧಾನ್ಯಾದಿ ಸಂಪತ್ತು) ಎಷ್ಟುದೊಡ್ಡವನೆನಿಸಿಕೊಳ್ಳಲಿಚ್ಛಿಸುವನೋ ಅವನು ತನ್ನಾತ್ಮನನ್ನು ಅಷ್ಟೇ ಕೀಳುಮಾಡಿಕೊಳ್ಳುತ್ತಾನೆ. ಇದು ಖಂಡಿತ

91 ಎಲ್ಲಿ ರಾಗದ್ವೇಷಗಳಿರುವುವೋ ಅಲ್ಲಿ ಯಾವಾಗಲೂ ದುಃಖ ವಿದ್ದೇಯಿರುತ್ತದೆ, ಎಲ್ಲಿ ಉದಾಶೀನತೆ ಇರುವುದೋ ಅಲ್ಲಿ ದುಃಖಗಳಿರು ವುದಿಲ್ಲ.

92 ಪ್ರತಿಪದಾರ್ಥದ ಗುಣದೋಷಗಳನ್ನು ವಿವೇಕಬುದ್ಧಿಯಿಂದ ಪರಿಶೀಲಿಸಿ ತಿಳಿದು ಆತ್ಮನನ್ನು ಅವುಗಳ ಅಂಟಿನಿಂದ ದೂರವಾಗಿರಿಸು. ಹೇಗೆ ನಿರ್ಮಲವಾದ (ಬಿಳುಪಾದ) ಸ್ಫಟಿಕವು, ಇತರ ಬಣ್ಣವುಳ್ಳ ವಸ್ತುಗಳ ಸಂಯೋಗದಿಂದ ಅದರದರ ಬಣ್ಣವುಳ್ಳದರಂತೆ ತೋರುತ್ತಾ-ಸ್ಫಟಿಕದ ನಿಜ ವಾದ ನೈರ್ಮಲ್ಯವು ಕಂಡುಬರುವುದಿಲ್ಲವೋ (ಮರೆಯಾಗುವುದೋ), ಹಾಗೆಯೇ ಶುದ್ಧನಾಗಿಯೂ, ನಿರ್ಮಲನಾಗಿಯೂ ಇರುವ ಆತ್ಮನು ಅನ್ಯ ಪದಾರ್ಥಗಳ ಸಂಯೋಗದಿಂದ ಅದಕ್ಕನುಸಾರವಾಗಿಯೇ ಇರುವಂತ ತೋರಿ ಬರುತ್ತಾನೆ. ಇದರಿಂದ ಆತ್ಮನ ಸಹಜಸ್ವರೂಪವು ಕಣ್ಮರೆಯಾಗುತ್ತದೆ.

93 ರಾಗದ್ವೇಷಗಳನ್ನು ದೂರತಳ್ಳಲು ಹೊರಟ ಮನುಷ್ಯನು ಅವು ಗಳನ್ನೇ ಕೆಲಸಕ್ಕೆ ಸೇರಿಸಿಕೊಳ್ಳುವುದಾದರೆ, ಆ ರಾಗದ್ವೇಷಗಳು ಹೇಗೆತಾನೆ ಬಿಟ್ಟುಹೋಗಬಲ್ಲವು? ಆರೋಗ್ಯವನ್ನು ಹೊಂದುವ ಇಚ್ಛೆಯುಳ್ಳ ಯಾವ ರೋಗಿಯಾದರೂ ಅಪಥ್ಯ (ರೋಗಕ್ಕೆ ಹಿತವಲ್ಲದ ವಸ್ತುಗಳು) ಸೇವನೆ ಮಾಡುತ್ತಲೇಯಿದ್ದರೆ ಆರೋಗ್ಯ ಹೇಗೆತಾನೆ ಉಂಟಾದೀತು?

94 ಜೀವನು ತನ್ನನ್ನು ಸಂಸಾರದ ಆಶ್ರಯದಿಂದ ಬಿಡಿಸಿಕೊಳ್ಳುವು ದಾಗದಿದ್ದಾಗ, ನನ್ನಿಂದೇನನ್ನೂ ಮಾಡಲಾಗುವುದಿಲ್ಲವೆಂದು ಹೇಳುತ್ತಾನೆ ಇಂತಹ ನೆನಪನ್ನು ಹೇಳಿಕೊಂಡು, ಜೀವನು ಆತ್ಮಕಲ್ಯಾಣಮಾಡಿಕೊಳ್ಳು ವುದಕ್ಕೆ ಪ್ರಯತ್ನಮಾಡುವುದಿಲ್ಲ, ಮತ್ತೆ ಅಂತಹ ಜೀವನು ಸಂಸಾರದಿಂದ ಹೇಗೆ ಮುಕ್ತನಾದಾನು?

95 ಅನುಭವವುಳ್ಳ ವೈದ್ಯನಿಂದ ಔಷಧಿಯನ್ನು ತಂದರೂ, ರೋಗಿಯು ಸೇವನೆಮಾಡಿದರೆ ಮಾತ್ರ ರೋಗವು ಗುಣವಾಗುತ್ತದೆ. ಅದೇರೀತಿ ಸದ್ಗು ರುವು ಅನುಭವಪೂರ್ವಕವಾದ ಸದುಪದೇಶವೆಂಬ ಔಷಧಿಯನ್ನು ಕೊಡು

ತ್ತಾನೆ ಅದನ್ನು ಮೋಕ್ಷಾಪೇಕ್ಷಿಗಳು ಗ್ರಹಿಸಿದರೆ ಆಗಮಾತ್ರ ಅವರ ಮಿಥ್ಯಾ ಭಾವವು ತೊಲಗುತ್ತದೆ

96. ಒಂದು ರಾಜ್ಯವನ್ನು ಸಂಪಾದಿಸಲು ಎಷ್ಟು ಪರಾಕ್ರಮವನ್ನು ತೋರಿಸುವುದು ಅವಶ್ಯಕವೋ, ಅದಕ್ಕಿಂತಲೂ ಎಷ್ಟೋ ಹೆಚ್ಚಾದ ಪರಾಕ್ರಮವನ್ನು ಧರ್ಮಪ್ರಭಾವನೆಮಾಡುವುದರಲ್ಲಿ ತೋರಿಸಬೇಕಾಗುತ್ತದೆ

97 ಅಭೇದದೆಶೆಗೆ ಬಾರದಿರುವ (ಸಮತಾಭಾವವನ್ನು ಹೊಂದದಿರುವ) ಜೀವಿಗಳು ಈ ಜಗತ್ತಿನ ಸೃಷ್ಟಿವಿಧಾನವನ್ನು ತಿಳಿಯಲಪೇಕ್ಷಿಸಿದರೆ ಅವು ಅದರಲ್ಲಿ ಸಿಕ್ಕಿಬೀಳುತ್ತವೆ

98. ಮೂಲದ್ರವ್ಯವೆಂದೂ ಉತ್ಪತ್ತಿಯಾಗುವುದಿಲ್ಲ, ಮತ್ತು ಅದಕ್ಕೆಂದೂ ನಾಶವುಂಟಾಗುವುದಿಲ್ಲ ಇದು ಅನುಭವಸಿದ್ಧವಾಗಿದೆ

99 ಕರ್ಮೋದಯವನ್ನು ಅಬಂಧಪರಿಣಾಮದಿಂದ ಅನುಭವಿಸುವುದೇ ಉತ್ತಮವಾಗಿದೆ

100 ಜೀವನು ತನ್ನ (ಆತ್ಮನ) ಸ್ವರೂಪವನ್ನು ತಿಳಿಯದಹೊರತು ಮುಕ್ತಿಯುಂಟಾಗುವುದಿಲ್ಲ, ಇದನ್ನು ಯಾರು ಸರಿಯಾಗಿ ತಿಳಿದುಕೊಳ್ಳುವರೋ ಅವರು ಜ್ಞಾನಿಗಳಾಗಿಹೋಗುತ್ತಾರೆ.

## ಅಧ್ಯಾತ್ಮ-ಶತಕ

1. ಯಾವನು ತನ್ನ ಗುಣದೋಷಗಳನ್ನು ಕುರಿತು ಚೆನ್ನಾಗಿ ವಿಚಾರಮಾಡಿ, ಗುಣಗಳನ್ನು ವೃದ್ಧಿಪಡಿಸುವುದಕ್ಕೂ ಮತ್ತು ದೋಷಗಳನ್ನು ನಾಶಮಾಡುವುದಕ್ಕೂ ಪ್ರಯತ್ನಿಸುವುದರಲ್ಲಿ ತನ್ನ ಉಪಯೋಗವನ್ನು (ಕ್ರಿಯಾಶಕ್ತಿಯನ್ನು) ನಿಯೋಜಿಸುವನೋ ಅಂತಹ ಮನುಷ್ಯನೇ ಸಂಸಾರದಿಂದ ಮುಕ್ತನಾಗುವವನು

2 ಸಮ್ಯಗ್ದರ್ಶನದ ಸಂಗಡಲೇ ಸಮ್ಯಗ್ಜ್ಞಾನವುಂಟಾಗುತ್ತದೆ ಸಮ್ಯಗ್ಜ್ಞಾನಪೂರ್ವಕವಾದ ತ್ಯಾಗವೇ ಸಮ್ಯಕ್ಚಾರಿತ್ರವೆನಿಸಿಕೊಳ್ಳುತ್ತದೆ ಇದೇ ಮೋಕ್ಷಕ್ಕೆ ಮಾರ್ಗ (ದಾರಿ—ಕಾರಣ) ವಾಗಿದೆ ನಾವು ಈ ಮಾರ್ಗವನ್ನು ತಿಳಿಯದೆ ಅನಾದಿಕಾಲದಿಂದಲೂ ಸಂಸಾರದಲ್ಲಿ ಬಿದ್ದಿದ್ದೇವೆ.

3 ಜ್ಞಾನವೇ ಮೋಕ್ಷಕ್ಕೆ ಕಾರಣವಾಗಿದೆ. ಅದಿಲ್ಲದೇಯಿರುವ ಅಜ್ಞಾನಿಜೀವರು ವ್ರತ, ನಿಯಮ, ಶೀಲ, ತಪಸ್ಸುಗಳನ್ನಾಚರಿಸಿದರೂ ಮೋಕ್ಷಲಾಭಹೊಂದುವುದಿಲ್ಲ

4 ಭೋಜನದ ಉಪಯೋಗವು ಕ್ಷುಧಾನಿವೃತ್ತಿಹೇತುವಾಗಿದೆ ಇದೇ ರೀತಿ ಜ್ಞಾನದ ಉಪಯೋಗವು ರಾಗಾದಿ ದೋಷಗಳ ನಿವೃತ್ತಿಗೆ ಹೇತು (ಕಾರಣ) ವಾಗಬೇಕು, ಕೇವಲ ಅಜ್ಞಾನದ ನಿವೃತ್ತಿಗಲ್ಲ, ಏಕೆಂದರೆ ಜ್ಞಾನವು ತಾನೇ ಅಜ್ಞಾನನಿವೃತ್ತಿರೂಪವಾಗಿದೆ

5 ಯಾವುದರಲ್ಲಿ ನೋಡುವಶಕ್ತಿಯಿರುವುದೋ ಅದೇ ಕಣ್ಣು ಎನಿಸಿ ಕೊಳ್ಳುತ್ತದೆ ಹಾಗಿಲ್ಲದಿದ್ದರೆ, ಕಣ್ಣಿಲ್ಲದಂತೆಯೇ ಇದೇರೀತಿ, ತನಗೂ ಇತರರಿಗೂ ವಿವೇಕವನ್ನುಂಟುಮಾಡುವುದೇ ಜ್ಞಾನ, ಹಾಗೆ ಮಾಡಲಾರ ದಿದ್ದರೆ, ಅಂತಹ ಜ್ಞಾನಕ್ಕೆ ಯಾವ ಬೆಲೆಯೂ ಇಲ್ಲ

6 ಸಕ್ಕರೆಯೆಂಬ ಶಬ್ದ (ಮಾತು) ದಿಂದ ಸಕ್ಕರೆಯೆಂಬ ಪದಾರ್ಥದ ಪರೋಕ್ಷಜ್ಞಾನವುಂಟಾಗುತ್ತದೆ, ಆದರೆ ಸಕ್ಕರೆಯನ್ನು ತಿಂದಹೊರತು ಅದರ ಮಧುರರುಚಿಯ ಅನುಭವಉಂಟಾಗಲಾರದು ಇದೇರೀತಿ, ಶ್ರುತಜ್ಞಾನದ (ಶಾಸ್ತ್ರದಿಂದುಂಟಾಗುವ ಜ್ಞಾನ) ಮೂಲಕವಾಗಿ ಆತ್ಮಸ್ವರೂಪವನ್ನು ತಿಳಿದ ಯಾವ ಮನುಷ್ಯನಾದರೂ ಆತ್ಮನಲ್ಲಿ ಲೀನನಾಗುವ ಪ್ರಯತ್ನಮಾಡದಿದ್ದರೆ, ಅವನು ಎಂದೂ ಆತ್ಮಸುಖದ ರುಚಿಯ ಅನುಭವವನ್ನು ಹೊಂದಲಾರನು.

7 ಜ್ಞಾನದ ಫಲವು ನಿಜವಾಗಿ ಪರದ್ರವ್ಯಗಳಮೇಲಿನ ಉಪೇಕ್ಷೆ (ಉದಾಶೀನ) ಯಾಗಿದೆ ಯಾರಲ್ಲಿ ಇದು ಉಂಟಾಗುತ್ತದೆಯೋ ಅವನೇ ಜ್ಞಾನಿ

8 ವಿದ್ಯಾರ್ಜನೆ ಉದರಪೋಷಣೆಗೋಸ್ಕರವಲ್ಲ ಉದರಪೋಷಣೆಯ ನ್ನಂತೂ ಕಾಗೆ, ಬೆಕ್ಕು ಮೊದಲಾದವುಗಳೂ ಮಾಡಿಕೊಳ್ಳುತ್ತವೆ. ಮನುಷ್ಯ ಜನ್ಮವನ್ನು ಹೊಂದಿದವನ ವಿದ್ಯಾರ್ಜನೆಯು ಉದರಪೋಷಣೆಮಾಡಿಕೊಳ್ಳು ವುದರಲ್ಲಿಯೇ ಕೊನೆಗೊಳ್ಳುವುದಾದರೆ, ಮನುಷ್ಯಜನ್ಮದ ವಿಶೇಷವೇನು? ಮನುಷ್ಯಜನ್ಮವಾದರೋ ಮೋಕ್ಷವನ್ನು ಸಾಧಿಸಿಕೊಡಬಲ್ಲುದಾಗಿದೆ

9 ಒಂದುವಸ್ತುವಿಗೂ, ಇನ್ನೊಂದುವಸ್ತುವಿಗೂ ತಾದಾತ್ಮ್ಯ (ಒಂದು ವಸ್ತುವು ಬೇರೊಂದು ವಸ್ತುವಿನೊಡನೆ ಸೇರಿ, ಬೇರೊಂದು ರೂಪವನ್ನು

ಹೊಂದುವಿಕೆ) ವಿಲ್ಲ ವಸ್ತುಗಳಮಾತನ್ನು ಬಿಡು; ಒಂದು ಗುಣಕ್ಕೂ ಮತ್ತೊಂದು ಗುಣಕ್ಕೂ ಮತ್ತು ಒಂದು ಪರ್ಯಾಯಕ್ಕೂ ಇನ್ನೊಂದು ಪರ್ಯಾಯಕ್ಕೂ ಸಂಬಂಧವಿಲ್ಲ ಇದನ್ನು ತಿಳಿದೂ ವಿಭಾವಗಳಿಗೆ (ಕ್ರೋಧಾದಿ ಅಶುದ್ಧ ಪರಿಣಾಮ) ವಶರಾಗಿ ಅನ್ಯರಿಂದ ಮಾಡಲ್ಪಡುವ ಸ್ತುತಿ, ನಿಂದೆಗಳಿಗಾಗಿ ಹರ್ಷವಿಷಾದಗಳನ್ನು ಮಾಡುವುದು–ಸಿದ್ಧಾಂತದಲ್ಲಿ ಅವಿಶ್ವಾಸ (ನಂಬದಿರುವಿಕೆ) ಮಾಡಿದಂತಾಗುತ್ತದೆ.

10 ಶಾಸ್ತ್ರಜ್ಞಾನ ಒಂದುಮಾತು, ಭೇದಜ್ಞಾನ ಮತ್ತೊಂದುಮಾತು, ತ್ಯಾಗವು ಭೇದಜ್ಞಾನದಿಂದಲೂ ಬೇರೆಯಾದ ವಸ್ತುವಾಗಿದೆ ಅದಿಲ್ಲದ ಹೊರತು ಪರಮಾರ್ಥ (ಮುಕ್ತಿ) ಲಾಭವುಂಟಾಗುವುದು ಕಷ್ಟ

11 ಉಪಯೋಗ (ಕಾರ್ಯಪಟುತ್ವ–ಕಾರ್ಯ) ದ ಸ್ಥಿರತೆಗೆ ಸ್ವಾಧ್ಯಾಯ (ಶಾಸ್ತ್ರಾಭ್ಯಾಸ–ಅಧ್ಯಯನ) ವೇ ಮುಖ್ಯಕಾರಣವಾಗಿದೆ. ಇದರಿಂದಲೇ, ಇದನ್ನು (ಅಧ್ಯಯನ) ಅಂತರಂಗತಪಸ್ಸಿನಲ್ಲಿ ಸೇರಿಸಿದೆ, ಮತ್ತು ಇದು ಕರ್ಮಕ್ಷಯಕ್ಕೆ ಕಾರಣವಾಗಿದೆ

12 ನಮ್ಮ ಪರಿಣಾಮಗಳನ್ನು ಶುದ್ಧಗೊಳಿಸಿಕೊಳ್ಳುವುದರಿಂದಲೇ ಆತ್ಮಕಲ್ಯಾಣವಾಗುತ್ತದೆ ಪರವಸ್ತು (ಶರೀರಾದಿ ಪರಿಗ್ರಹಗಳು) ಗಳು ವ್ಯಾಕುಲಕ್ಕೆ (ಆತಂಕ–ಭಯ–ಚಿಂತೆ) ಕಾರಣವಾಗುವುದಿಲ್ಲ ಅವುಗಳ ಸಂಬಂಧದಲ್ಲಿನ ನಮ್ಮ ದೃಷ್ಟಿಯೇ ವ್ಯಾಕುಲಕ್ಕೆ ಕಾರಣವಾಗುತ್ತದೆ ಅವುಗಳನ್ನು (ಪರಿಗ್ರಹಗಳನ್ನು) ದೂರತಳ್ಳು, ಪರಿಗ್ರಹಗಳನ್ನು ದೂರತಳ್ಳುವುದರಿಂದ (ತ್ಯಜಿಸುವುದರಿಂದ) ಪ್ರತಿಯೊಂದು ಸ್ಥಾನವೂ ಆತ್ಮಕಲ್ಯಾಣವನ್ನುಂಟುಮಾಡುವ ತೀರ್ಥಕ್ಷೇತ್ರವಾಗುತ್ತದೆ [ಸ್ಥಾನಶಬ್ದಕ್ಕೆ ಸ್ಥಳವೆಂದೂ, ದೇವಾಲಯವೆಂದೂ ಅರ್ಥವಿದೆ]

13 ನೀನು ಲೋಕವನ್ನಾವದೃಷ್ಟಿಯಿಂದ ನೋಡುವೆಯೋ, ಅದೇ ದೃಷ್ಟಿಯನ್ನು ಆತ್ಮನಕಡೆಗೂ ಇಡು, [ಲೋಕಹಿತವನ್ನು ಬಯಸುವಂತೆಯೇ ಆತ್ಮಹಿತದಲ್ಲೂ ದೃಷ್ಟಿಯಿಡು] ಇದೇ ಶ್ರೇಯಸ್ಸಿಗೆ [ಮಂಗಲ–ಶುಭ] ದಾರಿಯಾಗಿದೆ ಮನವಚನಕಾಯಗಳಸಂಗಡ ಸೇರಿರುವ ಕಷಾಯ [ಕ್ರೋಧಾದಿಗಳ] ಗಳ ವ್ಯಾಪಾರವೇ ಅನರ್ಥಕ್ಕೆ ಮೂಲವಾಗಿದೆ [ಅಂದರೆ ಬೇರಿನಂತಿದೆ]

14 ಬಾಹ್ಯಪದಾರ್ಥಗಳು [ಶರೀರಾದಿ ಪರಿಗ್ರಹಗಳು] ಆತ್ಮಕಲ್ಯಾ

ಣಕ್ಕೆ ಸಾಧಕಗಳೂ ಅಲ್ಲ, ಬಾಧಕಗಳೂ ಅಲ್ಲ ಸಾಧಕ ಬಾಧಕಗಳು ನಮ್ಮದೇ ಆದ ಶುದ್ಧಾಶುದ್ಧ [ಶುಭಾಶುಭ] ಪರಿಣಾಮಗಳೇ ಆಗಿವೆ.

15 ಶರೀರಾದಿ ಪರವಸ್ತುಗಳನ್ನು ರಕ್ಷಣೆಮಾಡು, ಆದರೆ ಹೀಗೆ ಮಾಡು ವಾಗ ನಿನ್ನನ್ನೇ [ನಿನ್ನಾತ್ಮನನ್ನು] ಮರೆತುಬಿಡಬೇಡ.

16. ಆತ್ಮಕಲ್ಯಾಣಮಾಡಿಕೊಳ್ಳುವ ಇಚ್ಚೆಯಿದ್ದರೆ [ಮೋಕ್ಷಸಾಧನೆಯ ಅಪೇಕ್ಷೆ], ಪಂಚೇಂದ್ರಿಯಸುಖ ಮತ್ತು ಕ್ರೋಧಾದಿಗಳಲ್ಲಿ ಪ್ರೀತಿಯನ್ನು ತೊರೆ [ಬಿಟ್ಟುಬಿಡು] ಮತ್ತು ಆತ್ಮಸ್ವರೂಪದಲ್ಲಿ ಪ್ರೀತಿಮಾಡು, ಆತ್ಮನನ್ನು ಕುರಿತೇ ಚಿಂತಿಸುತ್ತಿರು

17 ಸಂಸಾರವು ಮೋಹರೂಪವಾಗಿದೆ [ಮೋಹವನ್ನು ಹುಟ್ಟಿಸತಕ್ಕುದಾಗಿದೆ] ಇದರಲ್ಲಿ ಮಮತೆಯನ್ನು ಮಾಡಬೇಡ ಕುಟುಂಬವನ್ನು ರಕ್ಷಣೆಮಾಡು, ಅದರಲ್ಲಿ ಆಸಕ್ತ [ಅತಿಯಾಗಿ ಪ್ರೀತಿಯನ್ನಿಡು] ನಾಗಬೇಡ ನೀರಿನಲ್ಲಿರುವ ಕಮಲದಂತೆ ಭಿನ್ನನಾಗಿರು ಇದೇ ಗೃಹಸ್ಥನಿಗೆ ಶ್ರೇಯಸ್ಕರ [ಶುಭದಾಯಕ] ವಾಗಿದೆ

18 ಯಾವಯಾವ ಸಮಯದಲ್ಲಿ ಏನೇನು ಪ್ರಾಪ್ತವಾಗುವುದೋ ಅದರಲ್ಲೇ ಸಂತೋಷದಿಂದಿರುವುದು ಸತ್ಪುರುಷರು ತೋರಿಸಿಕೊಟ್ಟಿರುವ ಒಳ್ಳೆಯಮಾರ್ಗವಾಗಿದೆ.

19. ಸರ್ವಜ್ಞಸ್ಥಾನ [ಮೋಕ್ಷ] ವನ್ನು ಕುರಿತು ಧ್ಯಾನಮಾಡು ಮುಕ್ತಜೀವನು, ರಾಗದ್ವೇಷ ಮತ್ತು ಅಜ್ಞಾನಗಳನ್ನು ಸಂಪೂರ್ಣವಾಗ ತ್ಯಜಿಸಿ, ಸಹಜಪರಿಶುದ್ಧವಾದ ಆತ್ಮಸ್ವರೂಪದಲ್ಲಿ ಸ್ಥಿರನಾಗಿರುವನು ಅಂತಹ ಪರಮಾತ್ಮಸ್ವರೂಪವು ಸ್ಮರಿಸಿಕೊಳ್ಳುವುದಕ್ಕೂ, ಧ್ಯಾನಮಾಡುವುದಕ್ಕೂ ಮತ್ತು ಹೊಂದುವುದಕ್ಕೂ ಯೋಗ್ಯಸ್ಥಾನವಾಗಿದೆ

20 ಉಪಾಯಮಾಡಿದಹೊರತು ಯಾವ ರೋಗವೂ ಇಲ್ಲದಂತಾಗುವುದಿಲ್ಲ ಇದೇರೀತಿಯಲ್ಲಿ, ಜೀವನಲ್ಲುಂಟಾಗುವ ಲೋಭ [ಆಶೆ] ರೂಪವಾದ ರೋಗವೂ ಉಪಾಯಮಾಡಿದಹೊರತು ಪರಿಹಾರವಾಗುವುದಿಲ್ಲ ಇಂತಹ ರೋಗವನ್ನು ದೂರಮಾಡಿಕೊಳ್ಳಲು ಜೀವನೆಂದೂ ಉಪಾಯವನ್ನು ಹುಡುಕುತ್ತಲೇ ಇಲ್ಲ

21. ಕ್ರೋಧ ಮಾನ ಮಾಯಾ ಲೋಭಗಳೇ ನಿಜವಾದ ಪಾಪ

ಗಳಾಗಿವೆ ಇವುಗಳಿಂದ ಅಪಾರವಾದ ಪಾಪ ಸಂಪಾದನೆಯಾಗುತ್ತದೆ ಸಾವಿರಾರುವರ್ಷಗಳಕಾಲ ತಪಸ್ಸುಮಾಡಿದ್ದವನೂ, ಒಂದೆರಡು ಘಳಿಗೆಗಳ ಕಾಲ ಕ್ರೋಧವಶನಾಗುವುದಾದರೆ, ಮಾಡಿದ್ದ ತಪಸ್ಸೆಲ್ಲವೂ ನಿಷ್ಫಲವಾಗಿ ಹೋಗುತ್ತದೆ.

22 ಮಾನ [ಅಹಂಕಾರ] ಮತ್ತು ಪೂಜೆ ಸತ್ಕಾರಾದಿಗಳ ಲೋಭ [ಮಾನ ಮರ್ಯಾದೆಗಳ ಆಶೆ] ವು ಆತ್ಮನ ದೊಡ್ಡ ಶತ್ರುವಾಗಿದೆ.

23 ಯಾವ ಜ್ಞಾನವು ಕರ್ಮನಾಶಕ್ಕೆ ಕಾರಣವಾಗಿದೆಯೋ, ಅಂತಹ ಜ್ಞಾನವು ಅನಧಿಕಾರಿ [ಯೋಗ್ಯನಲ್ಲದವನು] ಜೀವನ ಕೈಸೇರುವುದರಿಂದ ಪ್ರಾಯಶಃ [ಅನೇಕವೇಳೆ] ಅವನಿಗೆ ಹಿತವಲ್ಲದ ಫಲವನ್ನುಂಟುಮಾಡುತ್ತದೆ

24 ಆರಂಭ ಮತ್ತು ಪರಿಗ್ರಹಗಳ ಪ್ರವೃತ್ತಿ [ಕಾರ್ಯಪಟುತ್ವ-ಮಾಡುವ ಇಚ್ಛೆ] ಯು ಆತ್ಮಹಿತವನ್ನು ನಾನಾರೀತಿಯಲ್ಲಿ ತಡೆಯತಕ್ಕುದಾಗಿದೆ, ಅಥವಾ ತತ್ಸಮಾಗಮದಿಂದಾಗುವ ಪ್ರಯೋಜನವನ್ನು ಹಚ್ಚಾಗಿ ತಡೆಗಟ್ಟಲು ಕಾರಣವಾಗುತ್ತದೆ. ಈ ಪ್ರವೃತ್ತಿಯನ್ನು ದೂರಮಾಡುವುದರಿಂದ ಎರಡುಪ್ರಕಾರವಾದ [ಅಂತರಂಗ ಮತ್ತು ಬಹಿರಂಗ] ಸಂಯಮಗಳೂ ಪ್ರಾಪ್ತವಾಗುತ್ತವೆ

25 ತತ್ವಜ್ಞಾನಪೂರ್ವಕವಾದ ರಾಗದ್ವೇಷಗಳ ನಿವೃತ್ತಿ [ಬಿಡುವಿಕೆ] ಯೇ ಆತ್ಮಕಲ್ಯಾಣಕ್ಕೆ ನಿಜವಾದ ಸಾಧನ [ಉಪಾಯ] ವಾಗಿದೆ.

26 ತನ್ನ ಪರಿಣಾಮಗಳನ್ನು ಶುದ್ಧಮಾಡಿಕೊಳ್ಳುವುದರಿಂದಲೇ ಎಲ್ಲರಿಗೂ ಒಳ್ಳೆಯದನ್ನುಂಟುಮಾಡಬಹುದಾಗುತ್ತದೆ.

27. ಸತ್ಯಮಾರ್ಗಾಚರಣೆ [ಧರ್ಮಾಚರಣೆ] ಗೆ ಅನುಕೂಲವಾಗಿರತಕ್ಕ ಶ್ರದ್ಧೆ [ನಂಬಿಕೆ ಮತ್ತು ಆದರ] ಯೇ ಮೋಕ್ಷಮಾರ್ಗದ ಉತ್ಪತ್ತಿಸ್ಥಾನವಾಗಿದೆ.

28 ಆತ್ಮಕಲ್ಯಾಣದ ಮಾರ್ಗವು ತನ್ನನ್ನು ಬಿಟ್ಟು ಬೇರೆಲ್ಲಿಯೂ ಇಲ್ಲ. ಎಲ್ಲಿಯವರೆಗೆ ಬೇರೊಂದೆಡೆಯಲ್ಲದನ್ನು ಹುಡುಕುವ ಸ್ವಭಾವ [ಪ್ರವೃತ್ತಿ] ನಮ್ಮಲ್ಲಿರುತ್ತದೆಯೋ, ಅಲ್ಲಿಯವರೆಗೆ ಆತ್ಮಕಲ್ಯಾಣದಮಾರ್ಗ ಸಿಕ್ಕುವುದು ಕಷ್ಟ

29 ಆತ್ಮಕಲ್ಯಾಣದ ಮಾರ್ಗವು ನಿನ್ನ ನಿರ್ಮಲವಾದ ಅಭಿಪ್ರಾಯ [ಆಶಯ, ಇಚ್ಛೆ] ವಾಗಿದೆ ಜೀವನು ಅನಾದಿಕಾಲದಿಂದಲೂ ತನ್ನಾತ್ಮನ ಸೇವೆಯನ್ನು ಮಾಡಿಕೊಳ್ಳದೆ [ಯೋಗಕ್ಷೇಮವನ್ನು ನೋಡಿಕೊಳ್ಳದೆ–ಆದರಿಸಿ ಪೂಜಿಸದೆ] ಕೇವಲ ಪರಪದಾರ್ಥಗಳ [ಪರಿಗ್ರಹಗಳ] ಸಂಗ್ರಹದಲ್ಲಿಯೇ ನಿರತನಾಗಿ ತನ್ನ ಪ್ರಿಯವಾದ ಜೀವನವನ್ನು ಮರೆತುಬಿಟ್ಟಿರುತ್ತಾನೆ ನಿನಗೆ ಆತ್ಮಕಲ್ಯಾಣಮಾಡಿಕೊಳ್ಳಬೇಕೆಂಬ ಇಚ್ಛೆಯಿದ್ದರೆ, ಪರಪದಾರ್ಥಗಳಲ್ಲಿ ಆತ್ಮೀಯತೆಯನ್ನು [ಸ್ನೇಹಸಂಬಂಧ] ಬಿಟ್ಟು ನಿರ್ಮಮ [ಮೋಹರಹಿತ] ನಾಗು

30 ಮನುಷ್ಯಜನ್ಮದ ಸಾರ್ಥಕತೆ [ಸಂಪೂರ್ಣಪ್ರಯೋಜನ] ಯು ಸದಾಚಾರದಿಂದ ಉಂಟಾಗುತ್ತದೆ ಸದಾಚಾರವಿಲ್ಲದಿದ್ದರೆ ದುರುಪಯೋಗವಾಗುತ್ತದೆ

31 ಪರದ್ರವ್ಯಗಳನ್ನು ರಕ್ಷಣೆಮಾಡು, ಆದರೆ ಹಾಗೆ ಮಾಡುವಾಗ ನಿನ್ನನ್ನು [ನಿನ್ನಾತ್ಮನನ್ನು] ಮರೆಯಬೇಡ

32 ದುರಾಲೋಚನೆಗಳಿಂದ ದೂರನಾಗಿರುವ ಜೀವನೇ ಆತ್ಮಕಲ್ಯಾಣಕ್ಕೆ ಪಾತ್ರನಾಗುತ್ತಾನೆ [ಆತ್ಮಕಲ್ಯಾಣಮಾಡಿಕೊಳ್ಳತಕ್ಕವನಾಗುತ್ತಾನೆ]

33 ಆತ್ಮಕಲ್ಯಾಣಮಾಡಿಕೊಳ್ಳಬೇಕೆಂಬ ಇಚ್ಛೆಯಿದ್ದರೆ, ಪ್ರಮಾದವನ್ನು [ಭ್ರಾಂತಿ–ತಪ್ಪುತಿಳುವಳಿಕೆ–ಮನಸ್ಸಿನ ದೌರ್ಬಲ್ಯ] ಬಿಡು, ಆತ್ಮಸ್ವರೂಪವನ್ನು ಪದೇಪದೇ ಚಿಂತನೆಮಾಡು

34 ಕಲ್ಯಾಣಮಾಡಿಕೊಳ್ಳುವುದೆಂದರೆ–ಇತರರನ್ನು ಅಪೇಕ್ಷಿಸದೆ [ಸಹಾಯಕೋರದೆ] ನಾವು ನಮ್ಮ ಆತ್ಮನ ಬಲದಮೇಲೆಯೇ ನಿಲ್ಲುವಂತಾಗಬೇಕು ಮತ್ತು ರಾಗದ್ವೇಷಗಳಿಂದ ನಮ್ಮನ್ನುಳಿಸಿಕೊಳ್ಳಬೇಕು

35 ಇತರರ ಸಂಬಂಧದಲ್ಲಿ ಕೆಟ್ಟದ್ದನ್ನಾಲೋಚಿಸಿ ನಿನ್ನ ಉಪಯೋಗ [ವ್ಯವಹಾರಶಕ್ತಿ] ವನ್ನು ಕಡಿಸಿಕೊಳ್ಳಬೇಡ

36. ಉಪವಾಸಾದಿಗಳು ಇಂದ್ರಿಯಗಳನ್ನು ವಶಪಡಿಸಿಕೊಳ್ಳುವುದಕ್ಕಾಗಿ ಮಾಡಲ್ಪಡುತ್ತವೆ, ಆದರೆ ಉಪವಾಸಮಾತ್ರದಿಂದ ಇಂದ್ರಿಯಗಳು ವಶವಾಗುವುದಿಲ್ಲ. ಇಂದ್ರಿಯಗಳನ್ನು ಜಯಿಸಬೇಕೆಂಬ ಗುರಿಯನ್ನು ಮುಂದಿಟ್ಟುಕೊಂಡು ವಿಚಾರಪೂರ್ವಕವಾಗಿ ನಡೆದರೆ ಮಾತ್ರ ಇಂದ್ರಿಯಗಳು ವಶವಾಗಿ

ಹೋಗುತ್ತವೆ ಗುರಿಯಿಟ್ಟುಕೊಳ್ಳದೆ ಬಿಟ್ಟ ಬಾಣವು ವ್ಯರ್ಥವಾಗಿಹೋಗು ವಂತೆ, ಉದ್ದೇಶವಿಲ್ಲದೆ ಮಾಡುವ ಉಪವಾಸಾದಿಗಳು ಆತ್ಮನಿಗೆ ಹಿತಕಾರಿ ಗಳಾಗುವುದಿಲ್ಲ

37 ಕಲ್ಯಾಣವನ್ನು ಹೊಂದುವ ಮಾರ್ಗವು ನಿರಾಕುಲತೆ–ಅಂದರೆ ನಿಶ್ಚಿಂತೆಯಾಗಿರುವಿಕೆ ಯಾವಯಾವ ಕಾರ್ಯಗಳನ್ನು ಮಾಡುವುದರಿಂದ ಮನಃಕ್ಲೇಶವುಂಟಾಗುವುದೋ, ಅಂತಹ ಕಾರ್ಯಗಳನ್ನು ಎಂದೂ ಮಾಡ ಬಾರದು, ಅವು ಶುಭವಾಗಿಯಾದರೂ ಇರಲಿ ಅಥವಾ ಅಶುಭವಾಗಿಯಾ ದರೂ ಇರಲಿ

38 ಯಾವ ತ್ಯಾಗದಿಂದ ಮನಃಕ್ಲೇಶವು ನಿವಾರಣೆಯಾಗುವುದಿಲ್ಲವೋ ಅಂತಹ ತ್ಯಾಗಕ್ಕ ಯಾವ ಮಹತ್ವ [ಶ್ರೇಷ್ಠತ್ವ] ವೂ ಇಲ್ಲ

39 ಯಾವ ದಾನವನ್ನಾದರೂ ಮಾಡಿದ ಬಳಿಕ ಮನಸ್ಸಿನ ಲೋಭ ಭಾವ [ನಷ್ಟಹೊಂದಿದೆನೆಂಬ ಚಿಂತ, ದುರಾಶೆ] ಹೋಗುವುದಿಲ್ಲವೋ, ಅಂತಹ ದಾನಕ್ಕೆ ಯಾವ ಮಹತ್ವ [ಹೆಚ್ಚಳಿಕೆ–ದೊಡ್ಡದೆಂಬ ಭಾವ] ವೂ ಇಲ್ಲ.

40 ದಾನವು ಕಲ್ಯಾಣ [ಪುರುಷಾರ್ಥಸಿದ್ಧಿ–ಮಹತ್ಪ್ರಯೋಜನ] ಕ್ಕೆ ಮುಖ್ಯವಾದ ಮಾರ್ಗವಾಗಿದೆ ಇದರಿಂದಲೇ ಧರ್ಮಕಾರ್ಯಗಳು ನಡೆಯು ತ್ತವೆ, ಮತ್ತು ಇದಿಲ್ಲದೇಹೋದರೆ ಧರ್ಮಾನುಷ್ಠಾನವೇ ಇಲ್ಲದಂತಾಗುತ್ತದೆ

41 ಆವಶ್ಯಕತೆಯನ್ನು ಕಡಮೆಮಾಡಿಕೊಳ್ಳುವುದೂ ತ್ಯಾಗವಾಗು ತ್ತದೆ ಬಾಹ್ಯವಸ್ತುಗಳನ್ನು ತ್ಯಜಿಸಿಬಿಡುವುದೇನೂ ಕಷ್ಟವಲ್ಲ ಆದರೆ ಮನಸ್ಸಿನ ಕಷಾಯಭಾವಗಳನ್ನು ನಿವೃತ್ತಿಮಾಡಿಕೊಳ್ಳುವುದು [ಬಿಡುವುದು] ಬಹಳಕಷ್ಟ

42 ಆತ್ಮನ ಪರಿಣಾಮಗಳನ್ನು ಶುದ್ಧವಾಗಿಟ್ಟುಕೊಳ್ಳುವುದಕ್ಕೆ, ಸಾಧ್ಯ ವಾಗುವವುಟ್ಟಿಗೂ, ಬಾಹ್ಯತ್ಯಾಗವು ನಿಯಮಿತವಾಗಿದೆ [ಅಂದರೆ ಎಷ್ಟು ತ್ಯಾಗದಿಂದ ಮನಸ್ಸಿನಲ್ಲಿ ಕ್ಲೇಶವುಂಟಾಗುವುದಿಲ್ಲವೋ ಅಷ್ಟೇ ತ್ಯಾಗಮಾಡು ವುದು ಉತ್ತಮ ಶಕ್ತಿಯನ್ನು ಮೀರಿ ತ್ಯಾಗಮಾಡಿ ಬಳಿಕ ಪರಿತಾಪಪಡುವುದು ಒಳ್ಳೆಯದಲ್ಲ ಅದರಿಂದಲೇ ಧರ್ಮಾಚರಣೆಯಲ್ಲಿ "ಶಕ್ತಿತಸ್ತ್ಯಾಗಃ" ಎಂದು ನಿಯಮಹೇಳಿದ್ದಾರೆ]

43. ಲಾಲಸತೆ [ಪ್ರೀತಿ ಮತ್ತು ಆಶೆ] ಯನ್ನು ಬಿಡುವುದೆಂದರೆ-ತ್ಯಾಗ ಮಾಡಿಬಿಟ್ಟ ವಸ್ತುವಿನ ಸಂಬಂಧದಲ್ಲಿ ಎಂದೂ ಚಿಂತಿಸದಿರುವುದು. ತ್ಯಾಗ ಧರ್ಮವನ್ನು ಒಪ್ಪಿಕೊಂಡಿರುವ ಜನರೂ ತ್ಯಾಗಮಾಡಿ ಬಿಟ್ಟ ಸಾಮಗ್ರಿಗಳ ವಿಚಾರದಲ್ಲಿ ಮತ್ತ ಚಿಂತಾಕುಲರಾಗುವುದಾದರ ಅಂತಹ ತ್ಯಾಗದಿಂದವರಿಗೆ ಉಂಟಾಗುವ ಲಾಭವೇನು?

44 ತ್ಯಾಗದ ಅರ್ಥ-ಮನಃಕ್ಲೇಶವಿಲ್ಲದಿರುವಿಕ, ಹಾಗಾಗದಿದ್ದರ ಆ ತ್ಯಾಗದಿಂದಾಗುವ ಲಾಭವೇನು?

45. ಯಾವನು ಪರದ್ರವ್ಯಗಳ ಸಂಬಂಧವಾದ ಮಮತ [ನನ್ನದು ಎಂಬ ಪ್ರೀತಿ] ಯನ್ನು ಬಿಡುವನೋ ಅವನಿಗೇ ಶಾಂತಿ ದೂರಯುವುದು, ಮತ್ತು ಅಂತಹ ಶಾಂತಿಯು ಚಾರಿತ್ರವನ್ನು ಕ್ರಮವಾಗಿ ಉನ್ನತಿಗೇರಿಸುತ್ತವೆ

46 ಬಾಹ್ಯಕ್ರಿಯಾಚರಣೆಯಲ್ಲಿ ನಿರತನಾಗಿರ ವಾಗಲೂ, ಅಂತರಂಗದಕಡೆಗೂ ದೃಷ್ಟಿಯಿಡುವುದೇ ಮೊದಲನೆಯ ಪುರುಷಾರ್ಥ [ಸಿದ್ಧಿ-ಮಹ ತ್ಪ್ರಯೋಜನ] ವಾಗಿದ

47. ಗೃಹತ್ಯಾಗಮಾಡಿ ತೀರ್ಥಸ್ಥಾನ [ಪುಣ್ಯಕ್ಷೇತ್ರ-ದೇವಾಲಯ] ಗಳಲ್ಲಿರುವುದರಿಂದ ಪುರುಷಾರ್ಥವಿಲ್ಲ ಪಂಡಿತ ಮಹಾನುಭಾವರಂತೆ ಜ್ಞಾನಾರ್ಜನೆ ಮಾಡಿಕೊಂಡು ಜನರಿಗೆ ಉಪದೇಶಮಾಡಿ ಸನ್ಮಾರ್ಗಪ್ರವರ್ತಕರನ್ನಾಗಿ ಮಾಡುವುದರಿಂದಲೂ ಪುರುಷಾರ್ಥವಿಲ್ಲ, ಮತ್ತು ದಿಗಂಬರತ್ವವನ್ನು ಸ್ವೀಕರಿಸುವುದರಿಂದಲೂ ಪುರುಷಾರ್ಥವಿಲ್ಲ. ಕರ್ಮೋದಯಕ್ಕೆ ಅನುಸಾರವಾಗಿ ಯಾವ ರಾಗಾದಿ ಭಾವಗಳುಂಟಾಗುವುವೋ, ಅವು ನಮ್ಮ ಜ್ಞಾನದಲ್ಲಿಯೂ ಉಂಟಾಗುತ್ತವೆ, ಮತ್ತು ಅವುಗಳ ಪ್ರವೃತ್ತಿಯೂ ನಮ್ಮಲ್ಲೇ ಇರುತ್ತದೆ ಆದರ ನಾವು ಆ ಭಾವಗಳನ್ನು ಕರ್ಮದಿಂದುಂಟಾದುವೆಂದು ಭಾವಿಸಿ ತಿಳಿದು ಇಷ್ಟಾನಿಷ್ಟಕಲ್ಪನೆಗಳಿಂದ ನಮ್ಮ ಆತ್ಮನನ್ನು ರಕ್ಷಿಸಿಕೊಳ್ಳಬಲ್ಲವರಾಗುತ್ತೇವ, ಇದೇ ನಿಜವಾದ ಪುರುಷಾರ್ಥವಾಗಿದ

48 ರಾಗದ್ವೇಷಗಳನ್ನು ಬುದ್ಧಿಪೂರ್ವಕವಾಗಿ ಗಲ್ಲುವ ಪ್ರಯತ್ನ ಮಾಡು ಕೇವಲ ಮಾತಿನಿಂದ ಮತ್ತು ಕೇವಲ ಶಾಸ್ತ್ರಾಭ್ಯಾಸದಿಂದ ಅವುಗಳನ್ನೆಂದಿಗೂ ದೂರಮಾಡಲಾಗುವುದಿಲ್ಲ ಪರವಸ್ತುಗಳಲ್ಲಿ ಇಷ್ಟಾನಿಷ್ಟ ಕಲ್ಪನೆಯುಂಟಾಗದಂತೆ ನೋಡಿಕೊಳ್ಳುವುದು ಆವಶ್ಯಕ, ಇದೇ ರಾಗದ್ವೇಷ

ಗಳನ್ನು ದೂರಮಾಡಿಕೊಳ್ಳುವ ನಿಜವಾದ ಸಾಧನವಾಗಿದೆ

49 ನಾವೇ ಸಂಪಾದಿಸಿಕೊಂಡಿರುವ ಕರ್ಮಗಳಿಂದುಂಟಾಗುವ ರಾಗ ದ್ವೇಷಗಳನ್ನು ನಾವು ತಡೆಗಟ್ಟಲು ಶಕ್ತರಾಗಲಾರೆವು ಆದರೆ ಕರ್ಮೋದಯ ದಿಂದುಂಟಾದ ರಾಗದ್ವೇಷಗಳಿಂದ-ಹರ್ಷವಿಷಾದಗಳನ್ನು ಹೊಂದದಿರುವುದು ನಮ್ಮ ಪುರುಷಾರ್ಥ (ಕಾರ್ಯಸಾಧನೆಮಾಡಿಕೊಳ್ಳುವ ಪೌರುಷ-ಶಕ್ತಿ) ದ ಕಾರ್ಯವಾಗಿದೆ

50 ಸಂಜ್ಞಿಪಂಚೇಂದ್ರಿಯ ಪ್ರಾಣಿಗಳ ಪ್ರಾಮುಖ್ಯತೆಯು (ಹೆಚ್ಚಳಿಕೆ-ಮಹತ್ವ-ಶ್ರೇಷ್ಠತೆ) ಸ್ವಪ್ರಯತ್ನದಮೂಲಕ ಮೋಕ್ಷಸಂಪಾದನೆಮಾಡಿಕೊಳ್ಳಬಲ್ಲ ಶಕ್ತಿಯಾಗಿದೆ

51 ಅಭಿಪ್ರಾಯ (ಆಶಯ-ಮನಸ್ಸಿನ ತೀರ್ಮಾನ) ದಲ್ಲಿ ಮಲಿನತೆ (ಕೊಳೆ, ಕಪ್ಪು-ಕುಂದು ಕೆಟ್ಟ ಸ್ವಭಾವ) ಯುಂಟಾಗದಿರುವುದೇ ಪುರುಷಾರ್ಥದ ಫಲವಾಗಿದೆ

52 ಮಾಡಬೇಕಾದುದನ್ನು ಆತ್ಮನೈರ್ಮಲ್ಯದೊಡನೆ ಮಾಡು ಅದೇ ಕಲ್ಯಾಣಕಾರಕವಾಗುತ್ತದೆ

53. ನೀನು ನಿರ್ಮಲನಾಗದಿರುವವರೆಗೆ, ಇತರರಿಗೆ ಉಪದೇಶಮಾಡುವುದಕ್ಕೆ ತಕ್ಕವನಾಗುವುದಿಲ್ಲ

54 ನಿನ್ನ ಪರಿಣಾಮವನ್ನು ನಿರ್ಮಲಮಾಡಿಕೋ ನಿನ್ನ ಪರಿಣಾಮಗಳಮೇಲೆ ನಿನಗೆ ಅಧಿಕಾರವಿದೆ ಇನ್ನೊಬ್ಬರ ಮನಸ್ಸಿನ ಪ್ರವೃತ್ತಿಯು ನಿನ್ನ ಅಧೀನವಲ್ಲ ಅದನ್ನು ಕುರಿತು ಯೋಚಿಸುವುದೂ ವ್ಯರ್ಥವಾಗಿದೆ.

55 ಎಷ್ಟು ನಿರ್ಮಲನಾಗಿರುವೆಯೋ ಅಷ್ಟೇಬೇಗ ಸಂಸಾರ ಬಂಧನದಿಂದ ಬಿಡಿಸಿಕೊಳ್ಳುವೆ

56 ಯಾರು ತನ್ನ ಮನಶ್ಶುದ್ಧಿಯನ್ನು ಕೆಡದಂತೆ ಕಾಪಾಡಿಕೊಳ್ಳಲು ಜಾಗರೂಕತೆಯಿಂದಿರುವನೋ, ಅವನು ಅನಾದಿಯಾದ ಸಂಸಾರವನ್ನು ದಾಟಿಹೋಗುವನು

57 ರಾಗದ್ವೇಷಗಳು ದುಃಖವನ್ನುಂಟುಮಾಡತಕ್ಕವು. ಹೀಗೆಂದು ಹೇಳುವುದರಲ್ಲಿ ಯಾವ ಸತ್ವವೂ (ತಿರುಳೂ) ಇಲ್ಲ ಏಕೆಂದರೆ ಆ ರಾಗದ್ವೇಷಗಳನ್ನು ಮಾಡುವವರು ನಾವು. ಆತ್ಮನೇ ಆತ್ಮನಿಗೆ ದುಃಖವನ್ನುಂಟುಮಾಡು

ವವನಾಗಿರುವನು ಇದರಿಂದಲೇ ಆತ್ಮನನ್ನು ನಿರ್ಮಲವಮಾಡಿಕೊಳ್ಳುವುದು ಅವಶ್ಯಕವಾಗಿದೆ

58 ಆ ನಿರ್ಮಲತೆಗಾಗಿ ಯಾವುದರ ಅಗತ್ಯವೂ ಇಲ್ಲ ಕೇವಲ ವಿಪರೀತಮಾರ್ಗದಲ್ಲಿ ನಡೆಯುವ ಪದ್ಧತಿಯನ್ನು ಬಿಟ್ಟೇಬಿಡುವುದು ಪ್ರಯೋಜನಕಾರಿಯಾಗುತ್ತದೆ

59 ಅನ್ಯಪದಾರ್ಥಗಳ ಸಂಯೋಗ (ಸೇರುವಿಕೆ) ದಿಂದ ಇಷ್ಟಾನಿಷ್ಟ ಗಳುಂಟಾಗುತ್ತವೆಯೆಂದು ಕಲ್ಪನೆಯುಂಟಾಗಬಾರದಷ್ಟುಮಟ್ಟಿಗೆ ಮನಸ್ಸನ್ನು ನಿರ್ಮಲಮಾಡಿಕೊಳ್ಳಬೇಕು.

60 ಬಾಯಿಮಾತಿನ ಚಾತುರ್ಯದಿಂದ ಯಾವಲಾಭವೂ ಇಲ್ಲ ಲಾಭವಾವುದೆಂದರೆ ಅಂತರಂಗದ ಪರಿಣಾಮಗಳನ್ನು ನಿರ್ಮಲವಾಗಿ ಮಾಡಿ ಕೊಳ್ಳುವುದೇ

61 ಅನ್ಯಾಯಮಾರ್ಗದಿಂದ ಸಂಪಾದಿಸಿದ ಐಶ್ವರ್ಯ ಮತ್ತು ಪಂಚೇಂದ್ರಿಯಸುಖ ಇವುಗಳು ಸನ್ಮಾರ್ಗಾಚರಣೆಗೆ ಅಡಚಣೆಗಳಾಗಿವೆ

62. ಗೃಹತ್ಯಾಗ, ಮೌನಧಾರಣ, ದೇಶವ್ರತಿ ಮಹಾವ್ರತಿಗಳ ವೇಷ ವನ್ನು ಧರಿಸೋಣ, ಇವುಗಳಿಂದಲೇ ಆತ್ಮಕಲ್ಯಾಣವಾಗುವುದಿಲ್ಲ ಆತ್ಮಕಲ್ಯಾ ಣದ ಕಾರಣವಾದರೋ ಅಂತರಂಗಶುದ್ಧಿಯೇ ಆಗಿದೆ

63 ನಿರ್ಮಲಾತ್ಮನ ಮಹತ್ವವೆಂತಹದೆಂದರೆ–ಉಪದೇಶವಿಲ್ಲದೆಯೇ ಜನರು ಅವನ ಮಾರ್ಗವನ್ನನುಸರಿಸುವರು

64 ಉತ್ತಮವಾದ ಬಾಹ್ಯವಸ್ತುಗಳ ಪ್ರಾಪ್ತಿಯು ಪುಣ್ಯದ ಫಲವಾ ಗಿದೆ. ವಿಶುದ್ಧಪರಿಣಾಮವು ಸಂಸಾರಬಂಧನವನ್ನು ಕತ್ತರಿಸಿಹಾಕುವ ಶಕ್ತಿ ಯುಳ್ಳದಾಗಿದೆ

65. ಬಾಹ್ಯಪ್ರಪಂಚದ ವೇಷವಿನ್ಯಾಸಕ್ಕೆ ಮರುಳಾಗಿ ನೈಮರೆಯದೆ, ಎಷ್ಟು ನಿರ್ಮಲನಾಗಿರುವೆಯೋ ಅಷ್ಟೇ ಶೀಘ್ರವಾಗಿ ಸಂಸಾರದ ಬಂಧನ (ಕಟ್ಟು) ದಿಂದ ಬಿಡುಗಡೆಹೊಂದುತ್ತೀಯೆ

66. ಶರೀರಸಂಬಂಧವಾದ ರೋಗವನ್ನು ಪರಿಹರಿಸಿಕೊಳ್ಳಲು ವೈದ್ಯ ಮತ್ತು ಔಷಧಿಗಳು ಅವಶ್ಯಕ. ಇಂತಹ ರೋಗದ ಮೂಲಕಾರಣವನ್ನೇ ನಾಶಮಾಡುವ ಸಾಮರ್ಥ್ಯ (ಶಕ್ತಿ) ವು ಅಂತರಂಗನೈರ್ಮಲ್ಯ (ವಿಶುದ್ಧಪರಿ

ಣಾಮ) ಕ್ಕಿದೆ. ಅಂದರೆ ರೋಗದ ಮೂಲಕಾರಣವು ಅಸಾತಾವೇದನೀಯ ಕರ್ಮ ಮತ್ತು ನೋಕರ್ಮಶರೀರ ವಿಶುದ್ಧಪರಿಣಾಮವು ಇವುಗಳನ್ನು ಹೋಗಲಾಡಿಸಿ ಶರೀರರಹಿತವನ್ನಾಗಿ ಮಾಡಿಬಿಡುತ್ತದೆ ಇದಕ್ಕೆ ವೈದ್ಯಾದಿಗಳ ಉಪಚಾರವು ಬೇಕಿಲ್ಲ, ಕೇವಲ ತನ್ನ ಪೌರುಷ (ಆತ್ಮಶಕ್ತಿ) ವನ್ನು ಮಾತ್ರ ರಕ್ಷಿಸಿಕೊಳ್ಳಬೇಕು.

67. ಯಾವ ಆತ್ಮನು ಮನೋನೈರ್ಮಲ್ಯ (ವಿಶುದ್ಧಪರಿಣಾಮ) ವನ್ನು ಜಾಗರೂಕತೆಯಿಂದ ಕಾಪಾಡಿಕೊಳ್ಳುವನೋ, ಅವನೇ ಈ ಅನಾದಿಯಾದ ಸಂಸಾರವನ್ನು ದಾಟಿಹೋಗಬಲ್ಲವನು

68 ಮನುಷ್ಯಜನ್ಮದ ಮಹಿಮೆ (ಮಹತ್ವ–ಹೆಚ್ಚುಗಾರಿಕೆ) ಯನ್ನು ಮಹರ್ಷಿಗಳು ಹಾಡಿ ಹೊಗಳಿದ್ದಾರೆ ಆದರೆ ಯಾರು ತನ್ನ ಪರಿಣಾಮದಿಂದ ಕಲುಷತೆ (ದೋಷ-ಪಾಪ-ಕೊಳೆ) ಯನ್ನು ದೂರಮಾಡಿಕೊಳ್ಳುವನೋ, ಅವನೇ ಆ ಮಹಿಮೆಯೆಂಬ ಸಂಪತ್ತಿನಿಂದಕೂಡಿದ ಶ್ರೀಮಂತನಾಗುತ್ತಾನೆ

69 ತನ್ನ ಪರಿಣಾಮಗಳನ್ನು ಪವಿತ್ರವಾಗಿರಿಸಿಕೊಳ್ಳಲು ಮಾಡುವ ಪ್ರಯತ್ನವೇ–ಕೆಟ್ಟ ಉದ್ದೇಶಗಳಿಂದ ರಕ್ಷಿಸಿಕೊಳ್ಳುವ ನಿಜವಾದ ಉಪಾಯವಾಗಿದೆ

70 ಕಾರಣವೆಂದೂ ಕೆಟ್ಟದ್ದಾಗುವುದಿಲ್ಲ ಶತ್ತಿನ ಸಹಜವಾದ ಬಣ್ಣವು ಹಳದಿಯಲ್ಲದಿದ್ದರೂ, ಕಾಮಿಲಾರೋಗಿಯ ಹಳದಿಬಣ್ಣವು ಪ್ರಸಿದ್ಧವಾಗಿದೆ. ಇದೇರೀತಿ ನಮ್ಮ ಮನಸ್ಸಿನಲ್ಲಿರುವ ಕಲುಷತೆ (ದೋಷ–ಪಾಪಭಾವ) ಯ ಕಾರಣದಿಂದಲೇ ಇಷ್ಟಾನಿಷ್ಟಗಳನ್ನು ಕಲ್ಪನೆಮಾಡಿಕೊಳ್ಳುತ್ತಿರುತ್ತೇವೆ ಈ ಕಲುಷತೆ (ಅಶುದ್ಧಭಾವ–ಕೊಳೆ) ಯು ಸಂಪೂರ್ಣವಾಗಿ ಹೋಗುವವರೆಗೆ (ಮಮತಾರಹಿತರಾಗುವವರೆಗೆ) ನಾವು ಸಂಸಾರದಲ್ಲಿ ಸುತ್ತುತ್ತಿರುತ್ತೇವೆ, ಶಾಂತಿಯ ಲವಲೇಶವಾದರೂ ಲಭಿಸುವುದಿಲ್ಲ ಏಕೆಂದರೆ, ಮನಸ್ಸಿನ ಶಾಂತಿಯನ್ನು ತಡೆಗಟ್ಟುವ ಪಾಪಭಾವವು ಅಲ್ಲೇ (ಮನಸ್ಸಿನಲ್ಲೇ) ಸ್ಥಿರವಾಗಿ ಕುಳಿತಿರುವುದರಿಂದ ಬಾಹ್ಯ ದ್ರವ್ಯ ಕ್ಷೇತ್ರಾದಿಗಳನ್ನು ಬಿಡುವುದರಿಂದುಂಟಾಗುವ ಲಾಭವೇನು? ರೋಗಪೀಡಿತನಾದ ಮನುಷ್ಯನಾರನ್ನಾದರೂ ಸಾಮಾನ್ಯವಾದ ಮನೆಯಿಂದ ಬಿಡಿಸಿ ಒಂದು ಸೊಗಸಾದ ಮಹಡಿಯ ಮನೆಯಲ್ಲಿರಿಸುವುದಾದರೆ, ಆತನು ನಿರೋಗಿಯಾಗಿಹೋಗುವನೇನು?

71. ನಿರಾಕುಲತೆಯಿಂದ ಕೂಡಿ (ನಿಶ್ಚಿಂತೆಯಿಂದ) ಒಂದುದಿನವಾದರೂ ತತ್ವವಿಚಾರವೆಂಬ ಆಭರಣದಿಂದ ನಿನ್ನನ್ನು ಅಲಂಕರಿಸಿಕೊಳ್ಳುವೆಯಾದರೆ, ಪುಣ್ಯಕ್ಷೇತ್ರಗಳನ್ನು ಮತ್ತು ತೀರ್ಥಕರನ್ನು ನಿನ್ನಲ್ಲೇ ಕಾಣಬಹುದು.

72. ಗೃಹತ್ಯಾಗಮಾಡಿದ ಮನುಷ್ಯನು ಎಷ್ಟೆಷ್ಟು ದಂಭ (ಮಹತ್ವವನ್ನು ತೋರಿಸುವ ಸುಳ್ಳು ಆಡಂಬರ) ವನ್ನು ಮಾಡುವನೋ ಸಾಧಾರಣ ಅಷ್ಟಷ್ಟೇಮಟ್ಟಿಗೆ ತನ್ನನ್ನು ಜಘನ್ಯ (ಹೀನ–ನೀಚ) ಮಾರ್ಗಕ್ಕೆ ಎಳೆದುಕೊಂಡುಹೋಗುತ್ತಾನೆ ಆದುದರಿಂದ ಎಲ್ಲಿಯವರೆಗೆ ಅಭ್ಯಂತರ ಕಷಾಯ (ಮನಸ್ಸಿನಲ್ಲಿನ ಕ್ರೋಧಾದಿ ಭಾವ) ನಿವೃತ್ತಿಯಾಗುವುದಿಲ್ಲವೋ ಅಲ್ಲಿಯವರೆಗೆ ಗೃಹತ್ಯಾಗದಿಂದ ಯಾವಲಾಭವೂ ಇಲ್ಲ

73 ತನ್ನಲ್ಲಿ ಪರರನ್ನು ಕುರಿತು ನಿರ್ಮಲವಾದ ಭಾವವುಂಟಾಗುವುದೇ ಸ್ವಚ್ಛತೆ (ಮನಸ್ಸಿನ ಪರಿಶುದ್ಧತೆ) ಯಾಗಿದೆ

74. ಭಾಗ್ಯಶಾಲಿಯಾದ ಜೀವನೇ ಮೋಕ್ಷಸಂಬಂಧವಾದ ವಿಚಾರ ವಿಮರ್ಶೆಗಳ ರುಚಿಯನ್ನು ನೋಡಿ ತಿಳಿಯಬಲ್ಲವನು ಮತ್ತು ಯಾವನು ಚಿಂತೆಗಳಿಂದ (ಮನೋವಿಕಾರಗಳಿಂದ) ದೂರನಾಗಿರುವನೋ ಅವನೇ ಮೋಕ್ಷ ಮಾರ್ಗದ ಅನುಯಾಯಿ (ಹಿಂಬಾಲಿಸು–ಅನುಸರಿಸು) ಯಾಗುತ್ತಾನೆ

75 ಯಾವನು ಪರವಸ್ತುಗಳ (ಶರೀರಾದಿ ಪರಿಗ್ರಹಗಳ) ಸಂಬಂಧವಾದ ಚಿಂತೆಯಿಂದ ತನ್ನನ್ನು ಉಳಿಸಿಕೊಳ್ಳಬಲ್ಲನೋ (ದೂರವಾಗಿರಬಲ್ಲನೋ) ಅವನೇ ಈ ಕಾಲವಲ್ಲಿ ಸನ್ಮಾರ್ಗದಲ್ಲಿ ನಡೆಯುವವನಾಗುತ್ತಾನೆ

76 ಧನಧಾನ್ಯಾದಿ ಸಂಪತ್ತುಗಳು ಪೂರ್ವಸಂಚಿತ ಪುಣ್ಯೋದಯದಿಂದ ಲಭಿಸುತ್ತವೆ ಆದರೆ ಆ ಸಂಪತ್ತಿನ ಸದುಪಯೋಗವು (ಒಳ್ಳೆಯ ಕಾರ್ಯದಲ್ಲಿ ಖರ್ಚುಮಾಡುವುದು) ಬಹಳ ವಿರಳವಾಗಿ ಪುಣ್ಯಾತ್ಮರಿಗೆ ಭಾಗ್ಯವಿಶೇಷದಿಂದ ಉಂಟಾಗುತ್ತದೆ.

77 ಅಪರಾಧಮಾಡಿದವನಮೇಲೆ ಕ್ರೋಧಮಾಡಲೇಬೇಕಾದರೆ– ಎಲ್ಲಕ್ಕಿಂತಲೂ ದೊಡ್ಡ ಅಪರಾಧಿಯು ಕೋಪ, ಅದೇ ಧರ್ಮ ಅರ್ಥ ಕಾಮ ಮೋಕ್ಷಗಳಿಗೆ ಶತ್ರುವಾಗಿದೆ ಆದುದರಿಂದ ಅದರ (ಕ್ರೋಧ) ಮೇಲೆ ಕೋಪಮಾಡು.

78. ಶರೀರವನ್ನು ಖಂಡಿತವಾಗಿ ನಿರ್ಬಲಮಾಡಿಕೊಳ್ಳಬೇಡ ವ್ರತ

ಉಪವಾಸಾದಿಗಳನ್ನು ಮಾಡು, ಆದರೆ ಯಾವ ವ್ರತಾಚರಣೆಯಿಂದ ಮನಃ ಕ್ಲೇಶವುಂಟಾಗುವುದೋ, ಅಂತಹ ವ್ರತಗಳನ್ನು ಮಾಡಬೇಡ, ಏಕೆಂದಗೆ ಮನಃಕ್ಲೇಶ (ದುಃಖ, ವ್ಯಥೆ, ವೇದನೆ) ಗಳನ್ನು ದೂರಮಾಡಿಕೊಳ್ಳುವುದೇ ವ್ರತಾಚರಣೆಯ ತಾತ್ಪರ್ಯ (ಉದ್ದೇಶ, ಅಭಿಪ್ರಾಯ–ಅರ್ಥ) ವಾಗಿದೆ.

79. ಮನಸ್ಸಿನಲ್ಲಿ ಎಷ್ಟು ವಿಕಲ್ಪಗಳು ಹುಟ್ಟುವುವೋ ಅವುಗಳ ಸಾವಿರದಲ್ಲೊಂದುಭಾಗದಷ್ಟು ಕರ್ತವ್ಯ (ಮಾಡಲು ಯೋಗ್ಯವಾದುದು) ವಾಗುವುದಿಲ್ಲ

80 ಯಾವನು ಮನಸ್ಸಿನಲ್ಲಿ ವ್ಯರ್ಥವಾದ (ಯೋಗ್ಯವಲ್ಲದ) ವಿಕಲ್ಪ ಗಳನ್ನು (ಭ್ರಾಂತಿ, ತಪ್ಪುಭಾವನೆ) ಮಾಡಿಕೊಳ್ಳದಿರುವನೋ ಆವನೇ ಕರ್ತವ್ಯ ಪರಾಯಣ (ಯೋಗ್ಯವಾದುದನ್ನೇ ಮಾಡುವ ಪ್ರವೃತ್ತಿಯುಳ್ಳವನು) ನಾಗುತ್ತಾನೆ.

81 ಅಸ್ಥಿರ ವಿಚಾರವಾಗಿ ಆಲೋಚಿಸುವುದು ಸಹಜವಾಗಿದೆ ಆದರೆ ತನ್ನಲ್ಲಿರುವ ತ್ರುಟಿ (ನ್ಯೂನತೆ, ದೋಷ) ಯನ್ನು ನೋಡಿ ತಿಳಿಯು ವುದು ವಿವೇಕಿಯಾದ ಮನುಷ್ಯನ ಕರ್ತವ್ಯವಾಗಿದೆ

82 ಪಂಚೇಂದ್ರಿಯವಿಷಯಗಳು ಮತ್ತು ಕ್ರೋಧಾದಿ ಕಷಾಯಗ ಳಲ್ಲಿ ರುಚಿ (ಪ್ರೀತಿ-ಇಚ್ಛೆ) ಯಿಲ್ಲದಿರುವಿಕೆಯ ಹೆಸರು ಉದಾಶೀನತೆಯೆಂದು

1—ಶರೀರಾದಿ ಪರಿಗ್ರಹಗಳ ಸಂಬಂಧವಾದ ಉದಾಶೀನತೆಯು ಆತ್ಮ ಕಲ್ಯಾಣಮಾರ್ಗದ ತಾಯಿ (ಜನ್ಮಸ್ಥಳ) ಯಾಗಿದೆ

2—ಆದರೆ ಧರ್ಮಸಾಧನದಲ್ಲಿ ಉದಾಸೀನತೆಯು ಅಹಿತಕಾರಿ ಯಾಗಿದೆ

83 ಉದಾಶೀನತೆಗೆ ಎರಡು ಶಕ್ತಿಗಳಿವೆ —

1—ಉದಾಶೀನತೆಯು ವೈರಾಗ್ಯಕ್ಕೆ ಜನ್ಮಸ್ಥಾನವಾಗಿದೆ.

2—ಉದಾಶೀನತೆಯೇ ಸಂಸಾರವೃಕ್ಷದ ಮೂಲೋತ್ಪಾಟನಮಾಡಲು ತಕ್ಕುದಾಗಿದೆ ಉದಾಶೀನತೆಯ ಅರ್ಥ–ಪರವಸ್ತುಗಳಲ್ಲಿ ಆತ್ಮೀಯತೆ (ನನ್ನದೆಂಬ ಭಾವ) ಯನ್ನು ಬಿಡುವುದೆಂದು.

84. ಎಂದು ಕುಟುಂಬದ ಜನರು, ಶತ್ರು ಮತ್ತು ಮಿತ್ರ ಇವರುಗಳಲ್ಲಿ ಸಮಾನಭಾವ ಉಂಟಾಗುವುದೋ ಅಂದಿನದಿನವೇ ಆನಂದದ ಸಮಯವಾಗಿದೆ.

ಕೆಟ್ಟುಹೋಗು) ವಾಗುವುವೋ, ಆಂದೇ ಅವನಿಗೆ ಅಪೂಜ್ಯತೆ (ಉದಾಶೀನ–ತಿರಸ್ಕಾರ) ಯುಂಟಾಗುತ್ತದೆ

98 ಮಾತಿನ ಸೌಂದರ್ಯ (ವಿನಯ ಮತ್ತು ಸರಳತೆ) ದಂತೆ ಮನಸ್ಸಿನ ಪ್ರವೃತ್ತಿಯೂ ಸುಂದರವಾಗಿರುತ್ತದೆಯೆಂಬ ನಿಯಮವೇನೂ ಇಲ್ಲ.

99. ಅಭಿಲಾಷೆಯು (ಇಚ್ಛೆ) ಅನಾತ್ಮೀಯ (ಆತ್ಮನಿಗೆ ವಿರೋಧವಾದ) ವಸ್ತುವಾಗಿದೆ, ಇದನ್ನು ಬಿಟ್ಟಿರುವವನು ಆತ್ಮಸ್ವರೂಪವನ್ನು ಹುಡುಕುವವನಾಗಿರುವನು.

100. ಯಾವನು ಮನೋನಿಗ್ರಹಮಾಡುವುದರಲ್ಲಿ (ಮನಸ್ಸನ್ನು ವಶಮಾಡಿಕೊಳ್ಳುವುದು–ಮನೋಗುಪ್ತಿಯನ್ನು ಪಡೆಯುವುದು) ಕೃತಕಾರ್ಯನಾಗುವನೋ, ಅವನಿಗೆ ಮೋಕ್ಷವೆಂಬ ಅರಮನೆಯು ಸಮೀಪದಲ್ಲಿದೆ, ಇತರ ಕಾರ್ಯಗಳ ನಿಷ್ಪತ್ತಿ (ಅಂತ್ಯ, ಸಮಾಪ್ತಿ-ನಿಶ್ಚಯ) ಯಾದರೋ ಯಾವ ವಸ್ತುವೂ ಅಲ್ಲ

## ಶಾಂತಿ-ಶತಕ

1. ಸಂಸಾರದಲ್ಲಿ ಯಾವನು ಇಚ್ಛೆಯನ್ನು ತಳ್ಳಿಬಿಡುವನೋ ಅವನೇ ಶಾಂತಿಯ ಅಧಿಕಾರಿಯಾಗುತ್ತಾನೆ.

2 ಸ್ಥಿತಿಗನುಸಾರವಾಗಿ ಶಾಂತಿಯುಂಟಾಗುತ್ತದೆ, ಗೃಹಸ್ಥನ ಸ್ಥಿತಿಯಲ್ಲಿ–ವೀತರಾಗಾವಸ್ಥೆಯ ಶಾಂತಿಯ ವಿಚಾರದಲ್ಲಿ ಶ್ರದ್ಧೆ (ಆದರ–ನಂಬಿಕೆ) ಯುಂಟಾಗಬಲ್ಲುದು, ಆದರೆ ಆದರ ರುಚಿ (ರಸಾನುಭವ–ಆನಂದ) ಬರಲಾರದು ತಿಂಡಿಯನ್ನು ಬೇಯಿಸಿ ಸಿದ್ಧಗೊಳಿಸುವುದರಿಂದ ಅದರ ರುಚಿಯು ಗೊತ್ತಾಗುವ ಸಂಭವವಿಲ್ಲ ರುಚಿಯಾದರೋ ಆಗಿಯುವುದರಿಂದ ಮಾತ್ರ ತಿಳಿದುಬರುತ್ತದೆ.

3. ಶುಭ ಮತ್ತು ಅಶುಭ ಕರ್ಮೋದಯಗಳುಂಟಾದಾಗ, ಸಮಭಾವವನ್ನಿಟ್ಟುಕೊಂಡಿರುವುದು ಶಾಂತಿಯ ಸಾಧನವಾಗಿದೆ

4 ಶುದ್ಧಭಾವನೆಗಳಲ್ಲಿಯೇ ಶಾಂತಿ ಮತ್ತು ಸುಖ ಇವು ನಿಶ್ಚಯವಾಗಿಯೂ ಇವೆ.

5 ಎಲ್ಲಿ ಶಾಂತಿಯಿರುವುದೋ, ಅಲ್ಲಿ ಮೂರ್ಛೆ (ವಿಸ್ಮರಣ–ಸಂಜ್ಞಾಹೀನತೆ) ಇರುವುದಿಲ್ಲ ಎಲ್ಲಿ ಮೂರ್ಛೆ ಇರುವುದೋ ಅಲ್ಲಿ ಶಾಂತಿಯಿಲ್ಲ

6 ತಾನೇ ಅಶಾಂತನಾಗಿರುವವನು ಇನ್ನೊಬ್ಬನಿಗೆ ಶಾಂತಿಯನ್ನೊದಗಿಸಿಕೊಡಬಲ್ಲನೇನು ?

7. ಸಂಸಾರದಲ್ಲಿ ಶಾಂತಿಯನ್ನು ಇಚ್ಛಿಸುವುದಾದರೆ, ಸಂಸಾರದಿಂದ ದೂರವಾಗಿರಬೇಕಾಗುತ್ತದೆ ಗೃಹಸ್ಥನಿಗೆ ಪರಿಗ್ರಹಗಳಿಲ್ಲದಹೊರತು ಶಾಂತಿ ದೊರೆಯುವುದಿಲ್ಲ. ಆದರೆ, ಶಾಸ್ತ್ರದಲ್ಲಿ ಪರಿಗ್ರಹವೇ ಅಶಾಂತಿಗೆ ಕಾರಣವೆಂದು ಹೇಳಲ್ಪಟ್ಟಿದೆ ಈ ವಿರೋಧವು ಪರಿಹಾರವಾಗುವುದು ಹೇಗೆ? ಎಂದರೆ, ಆಗಮ (ಶಾಸ್ತ್ರ) ವೇ ಪರಿಹಾರವನ್ನು ಹೇಳುತ್ತದೆ ನ್ಯಾಯಮಾರ್ಗದಲ್ಲಿ ಪರಿಗ್ರಹಗಳನ್ನು ಸಂಪಾದಿಸುವುದರಿಂದ ದುಃಖವುಂಟಾಗುವುದಿಲ್ಲ ಅದರಲ್ಲಿ (ಪರಿಗ್ರಹಗಳಲ್ಲಿ) ಆಸಕ್ತಿ (ಮಮತೆ–ಪ್ರೀತಿ) ಯಿಲ್ಲದಿರುವುದೇ ಶಾಂತಿಗೆ ಕಾರಣವಾಗುತ್ತದೆಯೆಂದು ಎಷ್ಟುದೂರ ಸಾಧ್ಯವೋ ಅಷ್ಟುದೂರ ವಸ್ತುಗಳನ್ನು ಒಳ್ಳೆಯರೀತಿಯಿಂದ ಉಪಯೋಗಿಸು ವಿಷಯಸುಖಗಳಲ್ಲಿಯೇ ಮಗ್ನನಾಗಿರಬೇಡ

8. ಊಟಮಾಡುವುದೆಂಬ ಮಾತಿನಿಂದ, ಹಸಿವನ್ನು ನಿವಾರಣೆಮಾಡಿಕೊಳ್ಳುವ ಉಪಾಯ (ಮಾರ್ಗ) ಗೊತ್ತಾದಂತಾಗುತ್ತದೆಯೇ ವಿನಾ, ಹಸಿವು ನಿವಾರಣೆಯಾಗಿಹೋಗುವುದಿಲ್ಲ ಅದೇರೀತಿಯಲ್ಲಿ, ಶಾಂತಿಗೆ ಭಂಗ (ಅಡ್ಡಿ) ತರುವಕಾರಣಗಳನ್ನು ಹೇಯ (ಬಿಡುವುದಕ್ಕೆ ಯೋಗ್ಯವಾದುದು) ವೆಂದು ತಿಳಿಯುವುದರಿಂದಲೇ ಶಾಂತಿ ದೊರಕಲಾರದು. ಶಾಂತಿಗೆ ಬಾಧಕವಾಗುವ ಕಾರಣಗಳು ದೂರತಳ್ಳಲ್ಪಟ್ಟಾಗಮಾತ್ರ ಶಾಂತಿಲಾಭವುಂಟಾಗುತ್ತದೆ

9. ಎಂದು ತತ್ವಗಳ ಸಂಬಂಧವಾದ ಜ್ಞಾನವು ಹುಟ್ಟುವುದೋ, ಅಂದು ಶಾಂತಿರಾಜ್ಯವು ಕೈಸೇರಿದಂತಾಗುತ್ತದೆ.

10 ಪರಪದಾರ್ಥಗಳನ್ನು (ಪರಿಗ್ರಹಗಳು) ಬಿಟ್ಟುಬಿಡುವುದರಿಂದಲೇ ಶಾಂತಿ ದೊರಕುವುದು ಬಹಳಕಷ್ಟ

11 ಕೇವಲ ಮಾತಿನ ಚಾತುರ್ಯದಿಂದಲೇ ಶಾಂತಿಯನ್ನು ದೊರಕಿಸಿಕೊಳ್ಳುವ ಇಚ್ಛೆಯು, ಸಕ್ಕರೆಯ ಸಂಬಂಧವಾದ ಮಾತಿನಿಂದಲೇ ಸಿಹಿಯನ್ನು ಅನುಭವಿಸಲೆಳಸುವ ಪ್ರಯಾಸದಂತಾಗುತ್ತದೆ

26 ಈ ಕಾಲದಲ್ಲಿ ನಿಷ್ಕಪಟವಾದ ಸ್ನೇಹ ದೊರೆಯುವುದೇ ದುರ್ಲಭ ವಾಗಿದೆ. ಆದುದರಿಂದ ನಿನ್ನಲ್ಲಿ ಉಂಟಾಗುವ ರಾಗದ್ವೇಷ ಭಾವನೆಗಳನ್ನು ಕಡಮೆಮಾಡಿಕೊಳ್ಳುವುದೇ ಅತ್ಯುತ್ತಮವಾದ ಆಚರಣೆಯಾಗಿದೆ

27. ಇತರರನ್ನು ಕುರಿತು ಚಿಂತೆಮಾಡುವುದೇ ಸುಖವನ್ನು ನಾಶಮಾಡತಕ್ಕದಾಗಿದೆ.

28. ಎಲ್ಲಾ ಆತ್ಮಗಳೂ ಒಂದೇ, ಪರ್ಯಾಯದೃಷ್ಟಿಯಿಂದ ಮಾತ್ರ ಬೇರೆಬೇರೆ

29 ಸುಖವಂತೂ ಸಂಸಾರದಲ್ಲಿಲ್ಲ, ಮೋಕ್ಷದಲ್ಲಿಯೂ ಇಲ್ಲ, ಕರ್ಮ ಬಂಧನದಲ್ಲಿಯೂ ಇಲ್ಲ, ಕರ್ಮಗಳ ಅಭಾವದಲ್ಲಿಯೂ (ಇಲ್ಲದಿರುವಿಕೆ) ಇಲ್ಲ, ಸುಖವಾದರೋ ನಿನ್ನಲ್ಲಿಯೇ ಇದೆ ಆದರೆ ನಿರಾಕುಲವಾದ (ಯಾವ ಚಿಂತೆಯೂ ಇಲ್ಲದ) ಸುಖವು ನಮ್ಮ ಆತ್ಮನ ಜೊತೆಯಲ್ಲೇ ಸೇರಿಕೊಂಡಿದ್ದರೂ, ನಾವು ಭ್ರಾಂತಿಯಿಂದದನ್ನು ಬೇರೇ ಸ್ಥಳದಲ್ಲಿ ಹುಡುಕುತ್ತಿದ್ದೇವೆ

30. ಯಾವ ದೇಶದಲ್ಲಿ ಜಾತಿಯನ್ನುಳಿಸಿಕೊಳ್ಳಲು ಮನುಷ್ಯರು ಪ್ರಯತ್ನಿಸುವುದಿಲ್ಲವೋ, ಅಂತಹ ದೇಶದಲ್ಲಿರುವುದು ನ್ಯಾಯವಲ್ಲ ಜಾತಿಯಲ್ಲಿ ಕಡಮೆಯಾದವರ ಬಾಲಕರನ್ನುಂದೆ ಹಣವು ದೊಡ್ಡದೆಂದು ತೋರುವುದಿಲ್ಲ ಧರ್ಮಮಾರ್ಗನಿರತರಾದ ಬಾಲಕರನ್ನು ಸಂರಕ್ಷಣೆಮಾಡುವುದಕ್ಕಿಂತಲೂ ಉತ್ಕೃಷ್ಟವಾದ ಧರ್ಮವು ಈ ಕಾಲದಲ್ಲಿ ಬೇರೊಂದಿಲ್ಲವೆಂದು ನನ್ನ ನಂಬಿಕೆ. ಧರ್ಮಸ್ಥಾನಗಳ ರಕ್ಷಣೆಯು ಇಂತಹ ಬಾಲಕರ ರಕ್ಷಣೆಗೆ ಅಧೀನ ವಾಗಿದೆ

31 ಯಾರಾದರೂ ನಿನ್ನನ್ನು ದೋಷವಿಲ್ಲದಿದ್ದರೂ ದೋಷಿಯನ್ನಾಗಿ ಮಾಡಿದರೆ, ಆಗ ನೀನು ಧರ್ಮಕಾರ್ಯದಿಂದ ವಿಮುಖನಾಗಬಾರದು, ಮತ್ತು ಅಂತಹ ಆರೋಪಮಾಡಿದವರ ವಿಚಾರದಲ್ಲಿ ಚಿಂತೆಯುಳ್ಳವನಾಗಲೂ ಬಾರದು ಆದರೆ ವಿಘ್ನಗಳು ಬಂದೊದಗಿದಾಗ ಮೊದಲಿಗಿಂತಲೂ ಹೆಚ್ಚು ಪರಿಶ್ರಮದಿಂದ ಆ ಕಾರ್ಯವು ಸಫಲವಾಗುವಂತೆ ಮಾಡಬೇಕು, ಮತ್ತು ಧರ್ಮಸಾಧನೆಯಲ್ಲಿ ದೃಢವಾಗಿರಬೇಕು ಇದರಲ್ಲಿಯೇ ಉಪಕಾರವಿರುವುದು

32 ಇಂದಿನವರೆಗೂ, ಜೀವನು ನಿಮಿತ್ತಕಾರಣಗಳನ್ನು ಮುಖ್ಯವಾಗಿಟ್ಟುಕೊಂಡೇ, ಆತ್ಮತತ್ವದ ರುಚಿಯಿಂದ ವಂಚಿತನಾಗಿದ್ದಾನೆ ಆದುದರಿಂದ

ಇನ್ನು ಮುಂದಾದರೂ, ತನ್ನಾತ್ಮನಕಡೆಗೇ ದೃಷ್ಟಿಯಿಟ್ಟು ಶ್ರೇಯಸ್ಸುಂಟಾಗುವ ಮಾರ್ಗದಲ್ಲಿ ನಡೆಯುವ ಪ್ರಯತ್ನಮಾಡುವುದು ಕರ್ತವ್ಯವಾಗಿದೆ.

33. ಯಾವ ಮನುಷ್ಯನು ತನ್ನ ಆತ್ಮನ ಸಂಬಂಧವಾಗಿ ಆಲೋಚನೆ ಮಾಡುವನೋ, ಅವನು ಸಂಸಾರದಿಂದ ಪಾರಾಗುವನು (ದಾಟಿ ಹೋಗುವನು), ಯಾವನು ಪರವಸ್ತುಗಳ (ಪರಿಗ್ರಹಗಳ) ಯೋಚನೆಯಲ್ಲೇ ತನ್ನ ಕಾಲವನ್ನು ಕಳೆಯುವನೋ ಅವನು ಸಂಸಾರದಲ್ಲಿರುವುದಕ್ಕೆ ಮಾತ್ರ ತಕ್ಕವನಾಗಿರುವನು.

34. ಯಾರನ್ನಾದರೂ ಪ್ರತ್ಯಕ್ಷವಾಗಿ (ಎದುರಿಗೇ) ನಿಂದೆಮಾಡುವುದಕ್ಕಿಂತಲೂ, ಪರೋಕ್ಷದಲ್ಲಿ (ಬೆನ್ನಹಿಂದೆ) ದೂಷಿಸುವುದು ದೊಡ್ಡಪಾಪವಾಗಿದೆ ಇನ್ನೊಬ್ಬರನ್ನು ನಿಂದೆಮಾಡುವುದು ಆತ್ಮಪ್ರಶಂಸೆಯ (ತನ್ನನ್ನು ಹೊಗಳಿಕೊಳ್ಳುವ) ಅಭಿಲಾಷೆಯೋ ಎಂದು ಸಂಶಯಉಂಟಾಗುತ್ತದೆ. ಅಲ್ಲದೆ ಒಬ್ಬನು ಮತ್ತೊಬ್ಬನನ್ನು ಕುರಿತು ಮಾಡುವ ನಿಂದೆಯನ್ನು ಕಿವಿಯಿಂದ ಕೇಳಿ ಅನುಮೋದಿಸುವ ಭಾವನೆಯೂ ಪಾಪಕ್ಕೆ ಕಾರಣವಾಗುತ್ತದೆ.

35 ಯಾವನು ತನ್ನ ರಾಗದ್ವೇಷಗಳನ್ನು ಬಿಟ್ಟಿರುವುದಿಲ್ಲವೋ, ಅವನು, ವ್ಯರ್ಥವಾಗಿ ಅನ್ಯರನ್ನು ವಂಚಿಸುವುದಕ್ಕಾಗಿ, ಬಹಿರಂಗದಲ್ಲಿ ತಪಸ್ವಿಯಂತೆ ತೋರಿಸಿಕೊಳ್ಳುತ್ತಾನೆ, ಮತ್ತು ಇತರರೂ ಅವನನ್ನು ತಪಸ್ವಿಯೆಂಬ ದೃಷ್ಟಿಯಿಂದಲೇ ನೋಡುತ್ತಿರುತ್ತಾರೆ. ಆದರೆ ಅವನನ್ನು ಕೇಳಿದರೆ–"ನಾನು ಡಾಂಭಿಕ (ಮಹತ್ವವನ್ನು ತೋರಿಸುವುದಕ್ಕಾಗಿಯೋ ಅಥವಾ ಅಭೀಷ್ಟಸಿದ್ಧಿಗಾಗಿಯೋ ಸುಳ್ಳು ಆಡಂಬರಮಾಡುವವನು) ನಾಗಿದ್ದೇನೆ. ಕೇವಲ ಅನ್ಯರು ನನ್ನಲ್ಲಿ ಸುಳ್ಳುಶ್ರದ್ಧೆಯನ್ನು ತೋರಿಸುತ್ತ, ನನ್ನನ್ನು ತಪಸ್ವಿಯೆಂದು ತಿಳಿದುಕೂಂಡಿರುವರು ಅವರು ಬುದ್ಧಿಹೀನರು" ಎಂದು ತಿಳಿದುಕೊಂಡಿರುವಂತೆ ಗೊತ್ತಾಗುತ್ತದೆ

36. ಪರವಸ್ತು (ಪರಿಗ್ರಹಗಳು) ಗಳ ಸಂಬಂಧದಿಂದ ಆತ್ಮನ ಪರಿಣಾಮವು ಕುಟಿಲ (ವಕ್ರ) ವಾಗಿಯೂ, ದೋಷಯುಕ್ತವಾಗಿಯೂ ಆಗಿಹೋಗುತ್ತದೆ ಚಿನ್ನವು ಬೆಳ್ಳಿಯ ಸಂಗ (ಬೆರಕೆಯಾಗು) ದಿಂದ ತನ್ನ ಶ್ರೇಷ್ಠತ್ವವನ್ನು ಕಳೆದುಕೊಳ್ಳುತ್ತದೆ ಎಂಬುದು ಇದಕ್ಕೆ ಉದಾಹರಣೆಯಾಗಿದೆ

37. ಯಾರು ಸಂಸಾರವನ್ನು (ಶರೀರಾದಿ ಪರಿಗ್ರಹಗಳನ್ನು) ನಂತೋ

ಷಪಡಿಸಲು ಪ್ರಯತ್ನಿಸುವರೋ, ಅವರು ತಮ್ಮ ಆತ್ಮದ್ರವ್ಯವನ್ನು ಹಳ್ಳಕ್ಕೆ ಕೆಡಹುವುದಕ್ಕಾಗಿ ಶ್ರಮಪಡುವಂತಾಗುತ್ತದೆ

38. ಎಲ್ಲಿ ಸೂರ್ಯನಿರುವನೋ ಅಲ್ಲಿ ಹಗಲು, ಎಲ್ಲಿ ಸತ್ಪುರುಷರಿರುವರೋ ಆ ಸ್ಥಳವೇ ತೀರ್ಥಕ್ಷೇತ್ರ, ಎಲ್ಲಿ ಆಶಾರಹಿತರಾದ ತ್ಯಾಗಿಗಳಿರುವರೋ ಅಲ್ಲೇ ಉದ್ದೇಶ ಒಳ್ಳೆಯದಾಗಿರುವುದು

39 ಪಾತ್ರದ ಯೋಗ್ಯತೆಯನ್ನು ತಿಳಿದು ತ್ಯಾಗ ಅಥವಾ ದಾನಮಾಡುವುದರಿಂದ ಸಂಸಾರವೆಂಬ ಬಳ್ಳಿಯು ನಾಶವಾಗಿಹೋಗುತ್ತದೆ. ಕುಪಾತ್ರ ದಾನದಿಂದ ಸಂಸಾರವು ವೃದ್ಧಿಹೊಂದುತ್ತದೆ

40 ಕ್ರೋಧಮಾನಮಾಯಾಲೋಭ ಮೊದಲಾದ ಕಷಾಯಭಾವಗಳು ಆತ್ಮನಿಗೆ ಅಪಥ್ಯಭೋಜನವಾಗುತ್ತವೆ ಇವುಗಳಿಂದ ಆತ್ಮನ ಸ್ವಾಸ್ಥ್ಯವು (ಆರೋಗ್ಯಸ್ಥಿತಿ) ನಾಶವಾಗುತ್ತದೆ ಇವುಗಳಿಂದ (ಕಷಾಯಭಾವಗಳಿಂದ) ದೂರನಾಗುವ ಉದ್ದೇಶವನ್ನಿಟ್ಟುಕೊಂಡು, ಕ್ಷಮೆ, ಮಾರ್ದವ, ಆರ್ಜವ, ಸತ್ಯ, ಶೌಚವೇ ಮೊದಲಾದ ಆತ್ಮಗುಣಗಳನ್ನು ರಕ್ಷಿಸಿಕೊಳ್ಳಬೇಕು

41 ಕ್ಷಮೆಯಿಂದ ಕ್ರೋಧಭಾವವನ್ನೂ, ಸರಳಸ್ವಭಾವದಿಂದ ಮಾನ (ಅಭಿಮಾನ–ಅಹಂಕಾರ) ಭಾವವನ್ನೂ, ನಿಷ್ಕಪಟತೆ (ಮುಚ್ಚುಮರ ಇಲ್ಲದಿರುವುದು) ಯಿಂದ ಮಾಯಾ (ವಂಚನೆ) ಭಾವವನ್ನೂ, ಸಂತೋಷದಿಂದ ಲೋಭಭಾವವನ್ನೂ, ಸತ್ಯವಚನದಿಂದ ಅಸತ್ಯಭಾವವನ್ನೂ, ಸಂಯಮದಿಂದ ಅಸಂಯಮ (ಪ್ರಮಾದ) ಭಾವವನ್ನೂ, ತಪಸ್ಸಿನಿಂದ ಇಚ್ಛೆಯ ಭಾವವನ್ನೂ, ತ್ಯಾಗದಿಂದ ಪರಿಗ್ರಹಸಂಬಂಧವಾದ ಪ್ರೀತಿಭಾವವನ್ನೂ ಮತ್ತು ಬ್ರಹ್ಮಚರ್ಯದಿಂದ ಅಬ್ರಹ್ಮ (ಸಂಸರ್ಗ–ಸ್ತ್ರೀಸಮಾಗಮ) ಭಾವವನ್ನೂ ಪರಿಹಾರಮಾಡಿಕೊಂಡು ಆತ್ಮನನ್ನು ರಕ್ಷಿಸಿಕೊಳ್ಳುವುದು ಅತ್ಯುತ್ತಮವಾದ ಧರ್ಮವಾಗಿದೆ

42 ಅನ್ಯಪ್ರಾಣಿಗಳಲ್ಲಿ ದಯೆಯನ್ನು ತೋರಿಸುವವರು ಅಥವಾ ಅನ್ಯಪ್ರಾಣಿಗಳನ್ನು ಕಾಪಾಡುವವರು ಲೋಕದಲ್ಲಿ ಬಹುಮಂದಿಯಿದ್ದಾರೆ, ಆದರೆ ತನ್ನ ಆತ್ಮನಲ್ಲಿ ದಯೆತೋರಿಸುವವರು ಅಥವಾ ತನ್ನಾತ್ಮನನ್ನು ರಕ್ಷಿಸಿಕೊಳ್ಳುವವರು ಬಹಳ ವಿರಳ.

43 ಪಂಚೇಂದ್ರಿಯ ಭೋಗಾಪೇಕ್ಷೆ ಮತ್ತು ಕ್ರೋಧಾದಿ ಕಷಾಯಗಳು ಇವುಗಳಿಂದ ಆತ್ಮನನ್ನು ದೂರಮಾಡಿಕೊಳ್ಳುವುದು ಆತ್ಮದಯಾಭಾವ ಅಥವಾ ಆತ್ಮರಕ್ಷಣೆಯಾಗಿದೆ.

44 ರೋಗಿಗಳು ಮತ್ತು ದರಿದ್ರರು ಇವರುಗಳಿಗಿಂತಲೂ, ಭೋಗಿಗಳು ಮತ್ತು ಧನವಂತರು ಹೆಚ್ಚಾದ ದಯೆಗೂ ಮತ್ತು ಸೇವೆಗೂ ಪಾತ್ರರಾಗಿದ್ದಾರೆ

45 ಹೃದಯಪವಿತ್ರತೆ (ಪರಿಶುದ್ಧಸ್ಥಿತಿ) ಯಿಂದಲೇ ಬಾಹ್ಯಪವಿತ್ರತೆಗೆ (ಹೊರಗಿನ ಪರಿಶುದ್ಧವಾದ ಆಚರಣೆ) ಬೆಲೆಯುಂಟಾಗುವುದು ಹೃದಯಪವಿತ್ರತೆಯು ಪಂಚೇಂದ್ರಿಯಭೋಗ ಮತ್ತು ಕಷಾಯಗಳಲ್ಲಿ ಸಂಯಮ (ಮನೋವೃತ್ತಿಯನ್ನು ತಡೆಯುವುದು) ವನ್ನಿಟ್ಟುಕೊಳ್ಳುವುದರಿಂದುಂಟಾಗುತ್ತದೆ.

46 ರಾಗ, ದ್ವೇಷ, ಮೋಹಾದಿಭಾವಗಳೆಂಬ ಶತ್ರುಗಳ ವಿಚಾರದಲ್ಲಿ ಯಾವಾಗಲೂ ಜಾಗರೂಕನಾಗಿರು, ಈ ಶತ್ರುಗಳಲ್ಲಿ ಯಾರನ್ನಾದರೂ ಕಂಡರೆ, ತಕ್ಷಣ ಹೊಡೆದು ಓಡಿಸು ಅಷ್ಟೇ ಅಲ್ಲ, ಅವುಗಳನ್ನು ಬಹಳ ಸೂಕ್ಷ್ಮದೃಷ್ಟಿಯಿಂದ ಎಚ್ಚರವಾಗಿ ನೋಡಿಕೊಳ್ಳುತ್ತಿರಬೇಕು ಏಕೆಂದರೆ, ಅವು ಸದ್ದು ಮಾಡದೆ ಒಳಗೆಹೋಗಿ ಬಚ್ಚಿಟ್ಟುಕೊಂಡಿರುತ್ತಾ, ಸಮಯವೊದಗಿದ ಕೂಡಲೇ, ತಮ್ಮ ಭಯಂಕರಸ್ವರೂಪವನ್ನು ತೋರಿಸಿಕೊಳ್ಳುತ್ತವೆ

47. ಅನ್ಯರು ಮಾಡಿದ ಪಾಪಕ್ಕೆ ಪ್ರಾಯಶ್ಚಿತ್ತವನ್ನು ಕುರಿತು ಚಿಂತೆ ಮಾಡಬೇಡ, ಮತ್ತು ಎಂದೂ ಅನ್ಯರಿಗೆ ಕೆಟ್ಟದ್ದನ್ನು ಹಾರೈಸಬೇಡ ಏಕೆಂದರೆ, ಅವರಿಗೆ ಕೆಟ್ಟದ್ದಾಗಲಿ ಅಥವಾ ಆಗದಿರಲಿ, ನಿನ್ನ ಅಂತರಂಗದಲ್ಲಿ ಈರ್ಷೆ, ದ್ವೇಷ, ಕ್ರೋಧ ಮೊದಲಾದ ಹಿಂಸಾಭಾವಗಳಿಗೆ ಸ್ಥಾನ ದೊರೆಯುತ್ತದೆ ಇದರಿಂದ ನಿನಗೆ ಅಪಾರ ದೋಷಬರುತ್ತದೆ

48. ಇತರರು ನಿನ್ನೊಡನೆ ಸಹನೆಯಿಂದ ವರ್ತಿಸಬೇಕೆಂದು ಅಪೇಕ್ಷಿಸುವೆಯಾದರೆ, ಮೊದಲು ನೀನು ನಿನ್ನನ್ನು ಸಹನಶೀಲ (ಸಹನೆ ತೋರಿಸುವವ) ನನ್ನಾಗಿ ಮಾಡಿಕೊ

49 ನಿನ್ನ ಶತ್ರುವು ನಿನ್ನ ಮನಸ್ಸೇ ಆಗಿದೆ, ಇದನ್ನು ಜಯಿಸುವ ಪ್ರಯತ್ನಮಾಡಬೇಕು

50 ನಿನ್ನ ಮನಸ್ಸಿನಲ್ಲಿರುವುದಕ್ಕೆ ವಿರೋಧವಾದ ಮಾತನ್ನು ಕೇಳಿದ ಮಾತ್ರದಿಂದಲೇ ಯಾರಮೇಲಾದರೂ ಸಂದೇಹಪಡುವುದು ಸರಿಯಲ್ಲ

51. ತನ್ನ ದೋಷಗಳನ್ನು ನಿರೀಕ್ಷಿಸುತ್ತಿರಬೇಕು ಮತ್ತು ಅವುಗಳನ್ನು

ಪ್ರಕಾಶಮಾಡಿಬಿಡಬೇಕು. ಅದು ಪಾಪದಿಂದ ಮುಕ್ತನಾಗುವುದಕ್ಕೆ ಮುಖ್ಯವಾದ ಉಪಾಯವಾಗಿದೆ

52 ಮಾನವನ್ನಪೇಕ್ಷಿಸುವವನೇ ಅಪಮಾನಕ್ಕೆ ಹೆದರುವವನು. ಮಾನಕಷಾಯದ ಭಾರವು ಮನಸ್ಸಿನಿಂದ ಇಳಿದರೆ, ಮನಸ್ಸು ಹಗುರವಾಗಿಯೂ ನಿರ್ಭಯವಾಗಿಯೂ ಆಗಿಹೋಗುತ್ತದೆ

53 **ಕ್ರೋಧಾದಿ ಕಷಾಯಭಾವಗಳಿಂದ ಕೂಡಿದ, ಮನವಚನಕಾಯಗಳ ವ್ಯಾಪಾರವು ಮದ್ಯಪಾನಕ್ಕಿಂತಲೂ ಹೆಚ್ಚಾದ ಹಾನಿಯನ್ನುಂಟುಮಾಡುತ್ತದೆ.**

54 ಎಲ್ಲಿಯವರೆಗೆ ನಾವು ನಮ್ಮ ದೋಷಗಳನ್ನು ದೂರಮಾಡಿಕೊಂಡಿರುವುದಿಲ್ಲವೋ, ಅಲ್ಲಿಯವರೆಗೆ ಇತರರ ದೋಷಗಳನ್ನು ಗಮನಿಸುವುದಕ್ಕಾಗಲೀ, ಅವುಗಳನ್ನು ಹೇಳುವುದಕ್ಕಾಗಲೀ ನಮಗೆ ಯಾವ ಅಧಿಕಾರವಿದೆ?

55 ಇತರರನ್ನು ದರಿದ್ರರೆಂದಾಗಲೀ, ಪಾಪಿಗಳೆಂದಾಗಲೀ ತಿಳಿದು ಮನಸ್ಸಿನಲ್ಲಿ ಅಹಂಕಾರಪಡಬೇಡ ಇಂತಹ ಭಾವನೆಯು ನಿನ್ನನ್ನು ಕೆಳಕ್ಕೆ ಬೀಳಿಸುವುದಾಗುತ್ತದೆ, ಅಂದರೆ ಅದೇ ಅವಸ್ಥೆಯನ್ನು ನಿನಗೆ ದೊರಕಿಸಿಕೊಡುವುದಾಗುತ್ತದೆ

56 ಪೂರ್ವಪುಣ್ಯೋದಯದಿಂದ ಪ್ರಾಪ್ತವಾಗಿರುವ ಶರೀರ, ಧನ, ಮತ್ತು ಅಧಿಕಾರಗಳನ್ನು ಹೆಚ್ಚಿಸಿಕೊಂಡು ಕಾಲವನ್ನು ದುರುಪಯೋಗಮಾಡಿಕೊಳ್ಳುವುದೆಂದರೆ-ದುರ್ಗತಿಗೆ ಆಹ್ವಾನಕೊಟ್ಟಂತೆ, ಮತ್ತು ಅವುಗಳನ್ನು (ಶರೀರ ಧನಾಧಿಕಾರಗಳು) ಸದುಪಯೋಗಮಾಡಿಕೊಳ್ಳುವುದು ಸ್ವರ್ಗಮೋಕ್ಷಗಳಿಗೆ ಬಾಗಿಲು ತೆರೆದಂತೆ, ಹೇಗೆಬೇಕೋ ಹಾಗೆಮಾಡು (ಶರೀರ ಧನ ಅಧಿಕಾರಗಳಿಂದ ಅನ್ಯರಿಗೆ ಹಾನಿಯನ್ನುಂಟುಮಾಡಿದರೆ ದುರ್ಗತಿ, ಒಳ್ಳೆಯದನ್ನು ಮಾಡಿದರೆ ಸದ್ಗತಿ ಎಂದು ಭಾವ)

57. ಪ್ರಪಂಚದಲ್ಲಿ ನಿನಗೆ ಅಹಿತವನ್ನುಂಟುಮಾಡುವವರು ಯಾರೋ ಎಂದು ತಿಳಿಯಬೇಡ ರಾಗದ್ವೇಷ ಮೋಹ ಮೊದಲಾದ ಭಾವಗಳೇ ನಿನಗೆ ಅಹಿತಕಾರಿಗಳಾಗಿವೆ ಈ ಭಾವನೆಗಳ ಸಂಬಂಧದಲ್ಲಿ ಯಾವಾಗಲೂ ಜಾಗರೂಕರಾಗಿರಬೇಕು ಮತ್ತು ಶೀಲ, ಸಂಯಮ, ತಪಸ್ಸು ಮೊದಲಾದವುಗಳನ್ನು ಆತ್ಮಹಿತಕಾರಿಗಳೆಂದು ತಿಳಿದು ಸೇವಿಸಬೇಕು

58 ಹೇಗೆ ಕಟ್ಟಿಗೆಯಿಂದ (ಕಟ್ಟಿಗೆಯ ತುಂಡುಗಳನ್ನು ಮಸೆಯುವುದರಿಂದ) ಹುಟ್ಟಿದ ಬೆಂಕಿಯು ಕಟ್ಟಿಗೆಯನ್ನೂ ಮತ್ತು ಕಬ್ಬಿಣದಿಂದುಂಟಾದ ಕಿಟ್ಟವು ಕಬ್ಬಿಣವನ್ನೂ ನಾಶಮಾಡುತ್ತದೆಯೋ, ಹಾಗೆಯೇ, ಆತ್ಮನಲ್ಲಿ ಹುಟ್ಟಿದ ಕಾಮಕ್ರೋಧಾದಿ ಅಶುಭಭಾವಗಳು ಆತ್ಮಗುಣಗಳನ್ನೇ ನಾಶಮಾಡುತ್ತವೆ.

59 ಹೇಗೆ ವಿಷಸೇವನೆಯಿಂದ ಪ್ರಾಣಘಾತವೂ, ಅಮೃತಪಾನದಿಂದ ಅಮರತ್ವವೂ ಉಂಟಾಗುವುವೋ, ಹಾಗೆಯೇ ಅಪವಿತ್ರವಿಚಾರ (ಅಶುದ್ಧಭಾವನೆ) ಗಳು ವಿಷದಂತೆ ಘಾತಕವಾಗುತ್ತವೆ ಮತ್ತು ಪವಿತ್ರವಿಚಾರ (ಶುಭಭಾವನೆ) ಗಳು ಅಮೃತದಂತೆ ಅಮರತ್ವವನ್ನುಂಟುಮಾಡತಕ್ಕವಾಗುತ್ತವೆ

60 ಅನ್ಯರಿಗೆ ಉಪಕಾರವಾಗುವಂತಹ ವ್ಯಾಪಾರನಾವುದನ್ನಾದರೂ ನೀನು ಮಾಡಿದ್ದರೆ, ಅದನ್ನು ಅನ್ಯರಿಗೋಸ್ಕರ ಮಾಡಿದೆ ಎಂಬ ತಿಳಿವಳಿಕೆಯು ಭ್ರಾಂತಿಯಿಂದ ಕೂಡಿದುದಾಗುತ್ತದೆ. ನೀನೇನನ್ನಾದರೂ ಮಾಡಿದ್ದರೆ, ಅದು ನಿನಗೋಸ್ಕರವೇ ಎಂದು ತಿಳಿಯುವುದು ನಿಜವಾದ ತಿಳಿವಳಿಕೆಯಾಗಿದೆ

61 ಪ್ರಯೋಜನವಿಲ್ಲದೆ ಪರಪದಾರ್ಥಗಳಕಡೆಗೆ (ಪರಿಗ್ರಹಗಳಿಗೆ) ಪಂಚೇಂದ್ರಿಯವ್ಯಾಪಾರಗಳನ್ನೂ ಮತ್ತು ಮನಸ್ಸನ್ನೂ ಹೋಗಗೊಡುವುದು ಅಪರಾಧವಾಗುತ್ತದೆ ಇದರಿಂದ ಆತ್ಮನ ಗುಣಗಳು ನಾಶವಾಗುತ್ತವೆ, ಮತ್ತು ಆತ್ಮನು ಪತನಹೊಂದುತ್ತಾನೆ,

62. ಅನಾವಶ್ಯಕವಾದ ಕಾರ್ಯಗಳಲ್ಲಿ ನಿರತವಾಗದಂತೆ, ಮನಸ್ಸು ಮತ್ತು ಇಂದ್ರಿಯ ವ್ಯಾಪಾರಗಳನ್ನು ತಡೆಯುವುದು, ಆತ್ಮನ ಗುಣಗಳನ್ನು ಪ್ರಕಾಶಗೊಳಿಸುವ ಮುಖ್ಯಸಾಧನವಾಗಿದೆ.

63. ದುಃಖವು ಮನುಷ್ಯತ್ವವನ್ನು ಪ್ರಕಟಗೊಳಿಸುವ ಸಾಧನವಾಗಿದೆ. ಸತ್ಯವಂತನಾದ ಮನುಷ್ಯನ ಜೀವನವು ದುಃಖದಿಂದ ಪ್ರಕಾಶಹೊಂದುತ್ತದೆ. ಚಿನ್ನದ ಬಣ್ಣವು ಕಾಯಿಸಿದಮೇಲೆ ತಾನೇ ಹೊಳವಾಗುವುದು,

64. ಪರಿಗ್ರಹಗಳ ಸಂಬಂಧವಾದ ದ್ರವ್ಯ ಕ್ಷೇತ್ರ ಕಾಲಾದಿ ಭಾವಗಳಲ್ಲಿ ಶಾಂತಿಯಿಲ್ಲ, ಆದಾದರೋ ನಿನ್ನೊಳಗೇ ಇದೆ ಪರದ್ರವ್ಯಗಳಮೇಲಿನ ಇಚ್ಛಾಪ್ರವೃತ್ತಿಯನ್ನು ದೂರಮಾಡಿದರೆ ಮಾತ್ರ ಶಾಂತಿಯನ್ನು ಕಾಣಬಹುದು.

65. ಪಂಚೇಂದ್ರಿಯ ವಿಷಯಗಳ ಸಂಬಂಧವಾದ ಮೂರ್ಛೆ (ಇಚ್ಛೆ, ವ್ಯಾಪಾರ) ಯನ್ನು ದೂರಕ್ಕೆ ಅಟ್ಟಿಬಿಡುವುದರಿಂದ ಎಲ್ಲೆಲ್ಲೂ ಶಾಂತಿಯೇ ಶಾಂತಿಯಾಗುತ್ತದೆ

66 ಎಲ್ಲಿ ಧರ್ಮಾತ್ಮರು ವಾಸಮಾಡುತ್ತಿರುವರೋ, ಆ ಸ್ಥಳವೇ ತೀರ್ಥಕ್ಷೇತ್ರವಾಗಿಹೋಗುತ್ತದೆ

67 ಉಪಯೋಗ (ಕಾರ್ಯಪಟುತ್ವ, ಕಾರ್ಯದಲ್ಲಿ ಉತ್ಸಾಹ) ವನ್ನು ಸರಿಯಾದರೀತಿಯಲ್ಲಿ– ಒಳ್ಳೆಯದಾರಿಯಲ್ಲಿ ನಿಯೋಜಿಸುವುದೇ ಶಾಂತಿಗೆ ಬಾಗಿಲು ತೆರೆದಂತಾಗುತ್ತದೆ

68 ಅಹಿತ (ಆತ್ಮಶುದ್ಧಿಗೆ ತಕ್ಕದ್ದಲ್ಲದ) ಕಾರ್ಯಗಳಲ್ಲಿ ಅಥವಾ ಅನಾವಶ್ಯಕವಾದ ಕಾರ್ಯಗಳಲ್ಲಿ ನಿಯೋಜಿತವಾದ ಉಪಯೋಗವನ್ನು ಜಾಗರೂಕತೆಯಿಂದ ಕಾಯುತ್ತಿರಬೇಕು. ಇದೇ ಉಪಯೋಗದ ಸದ್ವಿನಿಯೋಗವಾಗಿದೆ.

**69 ಆತ್ಮನು ಪರಿಗ್ರಹ (ಶರೀರ, ಬಂಧು, ಮಿತ್ರ, ಪುತ್ರ, ಕಳತ್ರ, ಧನ, ಧಾನ್ಯಾದಿಗಳು) ದಿಂದ ಬೇರೆಯಾದವನೆಂದು ದೃಢವಾಗಿ ನಂಬುವುದೇ, ಆತ್ಮಜ್ಞಾನಪ್ರಾಪ್ತಿಗೆ ಮೊದಲನೆಯ ಹಂತವಾಗಿದೆ.**

70 ಯಾವಾಗಲೂ ನಿನ್ನ ವಿಚಾರಗಳಮೇಲೆ ಕಂಟ್ರೋಲ್ (ಅಧಿಕಾರ ಸ್ವಾಮಿತ್ವ) ಇಟ್ಟರು ಇದರಿಂದ ಪಂಚೇಂದ್ರಿಯ ಮತ್ತು ಕಷಾಯಗಳಲ್ಲಿ ಪ್ರೀತಿಯನ್ನಿಡದಿರುವಂತಾಗುತ್ತದೆ

71 ನಾವೇ ನಮ್ಮ ಶಾಂತಿಗೆ ಬಾಧಕ (ಅಡ್ಡಿತಂದುಕೊಳ್ಳುವಿಕೆ) ರಾಗುತ್ತೇವೆ ಆತ್ಮನಿಂದ ಬೇರೆಯಾದ ಯಾವ ಚೇತನಾಚೇತನ ಪದಾರ್ಥಗಳಾಗಲೀ ಶಾಂತಿಗೆ ಬಾಧಕವಾಗುವುದಿಲ್ಲ ಹುಟ್ಟಿದ ಸ್ಥಿತಿಯಲ್ಲೇ ಇರುವ ಮದ್ಯ (ಹೆಂಡ) ವು ಮನೋವಿಕಾರಕ್ಕೆ ಕಾರಣವಾಗುವುದಿಲ್ಲವಷ್ಟೆ (ಹೆಂಡವು ಈಚಲಮರದಿಂದ ಇಳಿಸಿದಾಗಲೇ ಕುಡಿದರೆ ಮತ್ತನ್ನುಂಟುಮಾಡುವುದಿಲ್ಲವಂತೆ. ಅದನ್ನು ಬಹುಕಾಲ ಇಡುವುದರಿಂದ ಹುಳಿಯಾಗ ಕುಡಿದವರಿಗೆ ಮನೋವಿಕಾರವನ್ನುಂಟುಮಾಡುತ್ತದೆ ಎಂದು ಹೇಳುತ್ತಾರೆ) ಯಾವ ಪದಾರ್ಥವೂ ನಮ್ಮನ್ನು ಬಲಾತ್ಕಾರವಾಗಿ ವಿಕಾರಗೊಳಿಸುವುದಿಲ್ಲ ನಾವೇ ಮಿಥ್ಯಾ (ಸುಳ್ಳಾದ) ವಿಕಲ್ಪಗಳಿಂದ ಅವುಗಳಲ್ಲಿ (ಪದಾರ್ಥಗಳಲ್ಲಿ) ಇಷ್ಟಾನಿಷ್ಟಕಲ್ಪನೆ

ಗಳನ್ನು ಮಾಡಿಕೊಳ್ಳುತ್ತಾ ಸುಖಿಗಳಾಗಿಯೂ ಮತ್ತು ದುಃಖಿಗಳಾಗಿಯೂ ಆಗುತ್ತೇವೆ.

72. ಯಾವನು ತನ್ನ ಹಿತವನ್ನು ತಿರಸ್ಕರಿಸದಿರುವನೋ, ಅವನೇ ಸುಖಕ್ಕೆ ಪಾತ್ರನಾಗುತ್ತಾನೆ (ಸುಖಪಡುವ ಯೋಗ್ಯತೆಯುಳ್ಳವನು).

73 ಮೋಹವನ್ನು ಜಯಿಸುವ ಇಚ್ಛೆಯಿದ್ದರೆ, ಅನ್ಯವಸ್ತುಗಳ (ಆತ್ಮನಿಂದ ಬೇರೆಯಾದ ಶರೀರಾದಿ ಪರಿಗ್ರಹಗಳು) ಸಂಬಂಧದಲ್ಲಿ ಉದಾಶೀನ ಭಾವವನ್ನಿಟ್ಟುಕೊ

74. ಯಾವ ಸಿದ್ಧಾಂತಜ್ಞಾನವು ತನಗೂ ಮತ್ತು ಇತರರಿಗೂ ಒಳ್ಳೆಯದನ್ನು ಮಾಡಲು ಸಾಧಕ (ಕಾರಣ) ವಾಗಿದ್ದಿತೋ, ಇಂದು ಅದನ್ನು (ಆ ಸಿದ್ಧಾಂತಜ್ಞಾನ) ಜನರು ತಮ್ಮ ವೃತ್ತಿ (ಉದ್ಯೋಗ–ಜೀವನಮಾರ್ಗ) ಗೆ ಸಾಧನವಾಗಿಟ್ಟುಕೊಂಡಿರುವರು; ಮತ್ತು ಯಾವ ಸಿದ್ಧಾಂತಜ್ಞಾನದಿಂದ, ನಾವು ನಮ್ಮ ಕರ್ಮವೆಂಬ ಕೆಸರನ್ನು (ಕೊಳೆಯನ್ನು) ತೊಳೆದುಕೊಳ್ಳಲು ಅಧಿಕಾರಿಗಳಾಗಿದ್ದೆವೋ, ಇಂದು ಆ ಜ್ಞಾನದ ಮೂಲಕವಾಗಿ ಶ್ರೀಮಂತರ ಹೊಗಳುವಿಕೆಯು ಮಾಡಲ್ಪಡುತ್ತಿದ ಹೀಗಾದುದು ಸಿದ್ಧಾಂತದ ದೋಷದಿಂದಲ್ಲ, ನಮ್ಮ ಮೋಹಕರ್ಮದ ಶಕ್ತಿಸಂಪನ್ನತೆಯಿಂದ.

75. ಮೋಹಕರ್ಮದ ಉದಯವು ನಿರ್ಗ್ರಂಥ (ಸರ್ವಸಂಗಪರಿತ್ಯಾಗ ಮಾಡಿದವರು) ರಿಗೂ ಮನಃಕ್ಲೇಶವನ್ನು ಉಂಟುಮಾಡುತ್ತದೆ ಎಂದಮೇಲೆ ದೇಶವ್ರತಿಗಳ (ಸಣ್ಣಸಣ್ಣ ವ್ರತಗಳುಳ್ಳವರು) ಮತ್ತು ಅವ್ರತಿ (ವ್ರತಾಚರಣೆಯೇ ಇಲ್ಲದವರು) ಗಳ ಮಾತಾದರೂ ಏನು?

76 ಇದು ಒಳ್ಳೆಯದು, ಅದು ಕೆಟ್ಟದ್ದು, ಇಂತಿಂತಹ ಸ್ಥಾನಗಳು (ಸ್ಥಿತಿ) ಉಪಯೋಗವುಳ್ಳವು, ಇಂತಿಂತಹ ಸ್ಥಾನಗಳು ಪ್ರಯೋಜನವಿಲ್ಲದುವು, ಇಂತಿಂತಹ ವ್ಯಾಪಾರಗಳು ಅಹಿತವಾದುವು, ಇಂತಿಂತಹ ವ್ಯಾಪಾರಗಳು ಸತ್ಸಮಾಗಮಕ್ಕೆ ಸಾಧಕವಾಗಿರುವುವು–ಹೀಗೆಂದು ವಿಚಾರಮಾಡುವುದೆಲ್ಲವೂ ಮೋಹಕರ್ಮೋದಯದ ತೆರೆಮಾಲೆಗಳಾಗಿವೆ

77 ಧರ್ಮಸಾಧನೆ (ಧರ್ಮಕಾರ್ಯಾಚರಣೆ) ಮಾಡುವುದರಲ್ಲಿ ಬಹುಕಾಲ ಕಳೆದುದಾಯಿತು. ನಾನಾಪ್ರಕಾರವಾದ ವ್ರತ ಸಂಯಮ ಪೂಜಾದಿಗಳನ್ನು ಮಾಡಿದುದಾಯಿತು ಆದರೂ ಇವುಗಳಿಂದುಂಟಾಗಬೇಕಾದ ರಾಗ

ದ್ವೇಷನಿವೃತ್ತಿರೂಪವಾದ ಪ್ರಯೋಜನದಕಡೆಗೆ ದೃಷ್ಟಿಹಾಯಿಸದಿದ್ದರೆ, ಅವುಗಳೆಲ್ಲವೂ ನಿಷ್ಫಲವಾಗುತ್ತವೆ (ಧರ್ಮಾಚರಣೆಯಿಂದ ರಾಗದ್ವೇಷ ನಿವೃತ್ತಿಯಾಗಬೇಕು, ಆದಾಗದಿದ್ದರೆ, ಧರ್ಮಾಚರಣೆಯ ಪ್ರಯಾಸವು ನಿಷ್ಫಲವಾಗುತ್ತದೆಯೆಂದು ಭಾವ)

78. ಯೋಗ (ಮನ, ವಚನ, ಕಾಯಗಳು) ಮತ್ತು ಕ್ರೋಧಾದಿ ಕಷಾಯಗಳೇ ಸಂಸಾರಕ್ಕೆ ಕಾರಣವಾಗಿವೆ, ಮತ್ತು ಇವುಗಳ ನಿವೃತ್ತಿ (ಬಿಡುವಿಕೆ) ಯೇ ಸಂಸಾರದಿಂದ ದೂರವಾಗುವ ಉಪಾಯವಾಗಿದೆ

79. ಅತಿಯಾದ ಪರಿಗ್ರಹಗಳ ಸಂಬಂಧದಿಂದ ಯಾರೂ ಸುಖವನ್ನು ಹೊಂದಿಲ್ಲ; ಅವುಗಳ ತ್ಯಾಗ (ತ್ಯಜಿಸಿಬಿಡುವಿಕೆ) ದಿಂದಲೇ ಸುಖಕ್ಕೆ ಪಾತ್ರರಾಗುವುದು

80. ಯಾವನ ಪವಿತ್ರ ಹೃದಯದಲ್ಲಿ ಕ್ರೋಧಾದಿ ಕಷಾಯಗಳ ವಾಸನೆ (ಇಚ್ಛೆ–ಭಾವನೆ) ಯಿಲ್ಲವೋ ಮತ್ತು ಯಾವನ ವ್ಯವಹಾರಗಳು ಅಂತರಂಗಶುದ್ಧಿಯಿಂದ ಕೂಡಿರುವುವೋ, ಅವನೇ ಸಂಸಾರದಲ್ಲಿ ಸುಖಿಯಾಗಿರಬಲ್ಲವನು

81 ನಾವು ಸಂಸಾರವನ್ನು ಸ್ವಾರ್ಥಿ (ತನ್ನ ಪ್ರಯೋಜನದಲ್ಲೇ ದೃಷ್ಟಿಯಿರುವುದು) ಯೆಂದು ಹೇಳುತ್ತೇವೆ. ಆಗ, ಹೀಗೆ ಹೇಳುವುದರ ಅರ್ಥ– ನಾವು ಸ್ವಾರ್ಥವುಳ್ಳವರಲ್ಲವೆಂದು ಹೇಳಿದಂತಾಗುತ್ತದೆ ಆದುದರಿಂದ ಪ್ರಯೋಜನರೂಪವಾದ ಇಂತಹ ವಿಕಲ್ಪ (ಒಂದನ್ನು ಬೇರೊಂದೆಂದು ತಿಳಿಯುವುದು) ಗಳನ್ನು ಬಿಟ್ಟು ಮಧ್ಯಸ್ಥಭಾವ (ಒಂದಕ್ಕೂ ಇನ್ನೊಂದಕ್ಕೂ ಹೊಂದಿಕೊಳ್ಳುವಂತಹ ಭಾವ) ವನ್ನು ದೃಢಪಡಿಸಿಕೋ, ಇದೇ ಸುಖಕ್ಕೆ ಕಾರಣವಾಗಿದೆ

82. ಪ್ರತಿಯೊಂದು ಪದಾರ್ಥದಲ್ಲಿಯೂ ಉಂಟಾಗುವ ಪರಿಣಮನವು (ಪರ್ಯಾಯ–ರೂಪಾಂತರ) ಸ್ವತಂತ್ರವಾಗಿರುತ್ತದೆ ಅವಕ್ಕೆ (ಪರ್ಯಾಯ, ಪರಿವರ್ತನೆ) ನಾವು ಒಡೆಯರೂ ಅಲ್ಲ, ಅಧೀನರೂ ಅಲ್ಲ, ಅಂತಹ ಪರಿವರ್ತನೆಗಳು ಬಿಟ್ಟುಹೋಗುವಂತಹವೂ ಅಲ್ಲ ಇಂತಹ ವಸ್ತುಸ್ಥಿತಿಯನ್ನು ತಿಳಿದೂ, ದೇಹ, ಧನ, ಸಂಪತ್ತು ಮೊದಲಾದವುಗಳಲ್ಲಿ ಮಮಕಾರ (ನನ್ನದು ಎಂಬ ಪ್ರೀತಿ) ವನ್ನು ಬಿಡದಿರುವ ಉನ್ಮಾರ್ಗಗಾಮಿ (ದುರಾಚಾರಿ) ಗಳಾದ

ಜೀವಿಗಳು ಬಾಹ್ಯತ್ಯಾಗ (ಪರವಸ್ತುಗಳನ್ನು ಬಿಡುವುದು) ಮಾಡಿದಮಾತ್ರಕ್ಕೇ ಎಂದೂ ಸುಖವನ್ನು ಹೊಂದಲಾರರು.

83 ಐಶ್ವರ್ಯವು ಸಂತೋಷಕ್ಕೆ ಕಾರಣವಾಗುವುದಾದರೆ, ಎಲ್ಲರಿಗಿಂತಲೂ ಅಧಿಕ ಸಂತೋಷವು ಧನಿಕರಿಗೆ ಮಾತ್ರ ಉಂಟಾಗುತ್ತಿದ್ದಿತು. ತ್ಯಾಗಿಗಳಾದವರೆಲ್ಲರೂ (ಪರಿಗ್ರಹಗಳನ್ನು ಬಿಟ್ಟವರು) ದುಃಖಿಗಳಾಗಿಹೋಗಬೇಕಾಗಿದ್ದಿತು. ಆದರೆ ವಸ್ತುಸ್ಥಿತಿ ಹೀಗಿಲ್ಲ ತ್ಯಾಗಿಗಳು ಸುಖಿಗಳಾಗಿರುವುದನ್ನೂ ಮತ್ತು ಧನಿಕರು ದುಃಖಿಗಳಾಗಿರುವುದನ್ನೂ ನೋಡುತ್ತಿದ್ದೇವೆ. ಇದರ ಮೂಲಕಾರಣವು–ಇಚ್ಛೆಯ ಅಭಾವದಲ್ಲಿಯೇ ಸುಖವುಂಟಾಗುತ್ತದೆ ಎಂಬುದು

84 ಪುಸ್ತಕಾದಿಗಳಲ್ಲಿ ಧರ್ಮವಿಲ್ಲ ಧರ್ಮಸ್ವರೂಪವನ್ನು ತಿಳಿಯುವುದರಲ್ಲಿ ಜ್ಞಾನಿಜೀವಿಗಳಿಗೆ ಪುಸ್ತಕಗಳು ನಿಮಿತ್ತಮಾತ್ರವಾಗಿವೆ

85 ಧರ್ಮದ ಮೂಲಕಾರಣವು ನಿರ್ಮಲತೆ (ಪರಿಶುದ್ಧವಾದ ಪರಿಣಾಮ) ಯಾಗಿದೆ ಮತ್ತು ನಿರ್ಮಲತೆಗೆ ರಾಗದ್ವೇಷಾದಿ ಭಾವಗಳ ನ್ಯೂನತೆ (ಅಭಾವ–ಇಲ್ಲದಿರುವಿಕೆ) ಯೇ ಕಾರಣವಾಗಿದೆ. ರಾಗದ್ವೇಷಾದಿಗಳ ನ್ಯೂನತೆ (ಅಭಾವ) ಯು ಪಂಚೇಂದ್ರಿಯವಿಷಯಗಳ ತ್ಯಾಗದಿಂದ ಉಂಟಾಗುತ್ತದೆ. ಕೇವಲ ಮಾತಿನಿಂದ ಧರ್ಮ ಉಂಟಾಗುವುದಿಲ್ಲ.

86. ಧರ್ಮವು ನಿರ್ಲೋಭತ್ವ (ಮತ್ತೊಬ್ಬರ ಪದಾರ್ಥವನ್ನು ಹೊಂದಬೇಕೆಂಬ ಇಚ್ಛೆಯಿಲ್ಲದಿರುವಿಕೆ) ವನ್ನುಂಟುಮಾಡಲು ಶಕ್ತವಾಗುತ್ತದೆ.

87 ಪರಪದಾರ್ಥ (ಶರೀರಾದಿ ಪರಿಗ್ರಹಗಳು) ಗಳಲ್ಲಿ ಸ್ವತ್ವ (ನನ್ನದಾಗಿರಬೇಕೆಂಬ ಇಚ್ಛೆ–ಅಧಿಕಾರ, ಹಕ್ಕು) ವನ್ನು ತ್ಯಾಗಮಾಡುವುದೇ (ಬಿಡುವುದೇ) ಸುಖವನ್ನುಂಟುಮಾಡಿಕೊಳ್ಳಲು ಅತ್ಯಂತ ಉತ್ತಮವಾದ ಉಪಾಯವಾಗಿದೆ.

88. ಅಭ್ಯಂತರಬೋಧ (ಆತ್ಮಜ್ಞಾನ) ವಿಲ್ಲದಹೊರತು, ಲೋಕಸಂಬಂಧವಾದ ಪ್ರಭುತ್ವವಿರುವವನಾದರೂ (ರಾಜ್ಯಾಧಿಕಾರಿ, ರಾಜ) ಎಂದೂ ಸುಖಿಯಾಗಲಾರನು

89. ಸಂತೋಷವೇ ಪರಮಸುಖ ಮತ್ತು ಅದೇ ನಿಜವಾದ ಸಂಪತ್ತು (ಧನ, ಐಶ್ವರ್ಯ) ಇಂತಹ ಸಂತೋಷವೆಂಬ ಅಮೃತದಿಂದ ಯಾವ ತೃಪ್ತಿಯುಂಟಾಗುತ್ತದೆಯೋ ಅದು ಬಾಹ್ಯಸಾಧನಗಳಿಂದ ಉಂಟಾಗುವುದೇ

ನಿನ್ನನ್ನು ದ್ವೇಷಿಸಿದರೂ, ನಿನಗೆ ಕೇಡನ್ನುಂಟುಮಾಡಿದರೂ, ನೀನುಮಾತ್ರ ಅವನಿಗೆ ಹಿತವನ್ನೇ ಕೋರಿ ಸೌಜನ್ಯದಿಂದ ವರ್ತಿಸು." ಪ್ರತಿಹಿಂಸೆಗೆ (ಸೇಡನ್ನು ತೀರಿಸಿಕೊಳ್ಳುವಿಕೆ) ಮನಸ್ಸಿನಲ್ಲಿ ಸ್ಥಳವನ್ನು ಕೊಟ್ಟೆಯಾದರೆ ಖಂಡಿತವಾಗಿಯೂ ನೀನು ಕೆಳಗೆಬೀಳುತ್ತೀಯೆ (ಕೀಳುದರ್ಜೆಗೆ ಇಳಿಯುತ್ತೀಯೆ).

3. ನಿರ್ದೋಷವಾದ ಸತ್ಯಕಾರ್ಯಗಳನ್ನು ಭಯ, ಸಂಕೋಚ ಅಥವಾ ಸ್ವಲ್ಪ ಬುದ್ಧಿ ಇವುಗಳನ್ನು ಕಾರಣಮಾಡಿಕೊಂಡು, ಎಂದೂ ಬಿಟ್ಟುಬಿಡುವುದು ಸರಿಯಲ್ಲ. ಕಾರ್ಯದ ದೃಢತೆ (ಅಲ್ಲಾಡದೇ ಇರುವುದು ಸ್ಥಿರವಾಗಿರುವುದು) ಯ ಶಕ್ತಿಯಿಂದ ಇಂದಿಲ್ಲದಿದ್ದರೂ ಕೆಲವುಕಾಲದ ಅನಂತರವಾದರೂ, ಜನರು ಆ ಕಾರ್ಯವನ್ನು ಒಳ್ಳೆಯದೆಂದು ಖಂಡಿತವಾಗಿ ತಿಳಿದುಕೊಳ್ಳುತ್ತಾರೆ

4 ಕರ್ತವ್ಯದಲ್ಲಿ ಪ್ರಮಾದ (ಭ್ರಾಂತಿ–ತಪ್ಪು) ಮಾಡದಿರುವುದೇ ಫಲಸಿದ್ಧಿಯ ಉದ್ಯಾನವಾಗಿದೆ.

5 ಯಾವನ ಬಾಯಿಯಿಂದಲಾದರೂ ನಿನಗೆ ವಿರೋಧವಾದ ಯಾವ ಮಾತನ್ನಾದರೂ ಕಿವಿಯಿಂದ ಕೇಳಿದೊಡನೆಯೇ ಅವನನ್ನು ನಿನ್ನ ವಿರೋಧಿ (ಶತ್ರು) ಯೆಂದು ಭಾವಿಸಿ ಕುಳಿತಿರಬೇಡ ವಿರೋಧದ ಕಾರಣವನ್ನು ಹುಡುಕು ಮತ್ತು ಆ ವಿರೋಧವನ್ನು ಪರಿಹರಿಸುವುದಕ್ಕೆ ಒಳ್ಳೆಯ ಮನಸ್ಸಿನಿಂದ ಪ್ರಯತ್ನಮಾಡು. ನಿನ್ನಲ್ಲಿ ಯಾವುದಾದರೂ ದೋಷವಿರಲೂಬಹುದು, ಅದು ನಿನ್ನ ತಿಳಿವಳಿಕೆಗೆ ಬಾರದೆಯೂ ಇರಬಹುದು ಇಂತಹ ಪರಿಸ್ಥಿತಿಯಲ್ಲಿ ಚನ್ನಾಗಿ ವಿಚಾರಮಾಡಿ ಶಾಂತಿ ಮತ್ತು ಪ್ರೇಮದಿಂದ ಕಾರ್ಯಸಾಧನೆ ಮಾಡಿಕೊಳ್ಳಬೇಕು

6. ಒಳ್ಳೆಯಕಾರ್ಯವನ್ನು ಮಾಡುತ್ತಿರುವ ನಿನ್ನೊಡನೆ ಯಾರಾದರೂ ಅದು ಕೆಟ್ಟದ್ದೆಂದು ಹೇಳಿದರೆ, ಕೆಟ್ಟದೆಂದು ಹೇಳಿದುದು ಒಳ್ಳೆಯದು. ಆದರೆ ಕೆಟ್ಟದ್ದನ್ನು ಒಳ್ಳೆಯದೆಂದು ಹೇಳಿ ಅದನ್ನು ಕೆಟ್ಟದ್ದನ್ನಾಗಿ ಮಾಡಿಡುವುದು ಬಹಳ ಕೆಟ್ಟದ್ದು

7. ಎಂದಾದರೂ ನಿನ್ನಮೂಲಕವಾಗಿ ಯಾವ ಪ್ರಾಣಿಗಾದರೂ ಏನಾದರೂ ಸೇವೆ (ಉಪಕಾರ–ಸಹಾಯ) ನಡೆದರೆ, ನಾನು ಆ ಪ್ರಾಣಿಗೆ

ಉಪಕಾರಮಾಡಿದೆನೆಂದು ಅಹಂಕಾರಪಡಬೇಡ, ಅದು ಆ ಪ್ರಾಣಿಯ ಪುಣ್ಯ ಕರ್ಮದ ಫಲವೆಂದೂ, ನೀನು ಅವನ ಪುಣ್ಯದ ದಾಸನೆಂದೂ ಮತ್ತು ನಿಮಿತ್ತ ಮಾತ್ರನೆಂದೂ ಭಾವಿಸು (ತಿಳಿದುಕೊ)

8· ಇತರರಮೂಲಕವಾಗಿ ನಿನಗೆಂದಾದರೂ, ಏನಾದರೂ ಅನಿಷ್ಟ (ಕೇಡು, ಹಾನಿ) ವುಂಟಾದರೆ ಅದಕ್ಕಾಗಿ ದುಃಖಪಡಬೇಡ; ಅದು ನಿನ್ನ ಪೂರ್ವಾರ್ಜಿತ ದುಷ್ಕರ್ಮದ ಫಲವೆಂದು ತಿಳಿ. ಇಂತಹವನು ನನಗೆ ಕೇಡನ್ನುಂಟುಮಾಡಿರುವನೆಂಬ ವಿಚಾರವನ್ನು ಎಂದೂ ಮನಸ್ಸಿಗೆ ತಂದುಕೊಳ್ಳಬೇಡ.

9. ನಾವು ಇತರರ ದೋಷಗಳನ್ನು ತೋರಿಸಿಕೊಡುವುದರ ಮುಖ್ಯ ಕಾರಣ–ನಮ್ಮ ಮನಸ್ಸಿನ ಕೆಟ್ಟಸ್ವಭಾವವೇ ಆಗಿದೆ ನಿನ್ನ ಮನಸ್ಸನ್ನು ನಿರ್ಮಲವಾಗಿ ಮಾಡಿಕೊ. ಲೋಕವೆಂದೂ ನಿನ್ನನ್ನು ದೋಷಿಯೆಂದು ಭಾವಿಸುವುದೇ ಇಲ್ಲ.

10. ನಿನ್ನಲ್ಲಿರುವ ದೋಷಗಳನ್ನು ನೋಡಿಕೊಳ್ಳುವ ಪದ್ಧತಿ (ಅಭ್ಯಾಸ) ಯನ್ನಿಟ್ಟುಕೊ ನಿನ್ನ ಮನಸ್ಸಿನಲ್ಲಿ ಹುಟ್ಟಬಹುದಾದ ದೋಷಗಳಕಡೆಗೆ ಸೂಕ್ಷ್ಮದೃಷ್ಟಿಯಿಂದ ಬಹಳ ಜಾಗರೂಕನಾಗಿ ನೋಡಿಕೊಳ್ಳುತ್ತಿರು. ನಿನ್ನ ಮನಸ್ಸಿನಲ್ಲಿ ದೋಷಗಳು ತುಂಬಿಕೊಂಡಿರುವುವೆಂದು ಕಂಡುಹಿಡಿದೆಯಾದರೆ, ಬಳಿಕ ಬೇರೆಯವರ ದೋಷಗಳನ್ನು ನೋಡಲು ನಿನಗೆ ಪುರಸತ್ತೇ (ಅವಕಾಶವೇ) ದೊರೆಯುವುದಿಲ್ಲ

11. ಜೀವನವು (ಆಯುಸ್ಸು) ಬಹಳ ಅಲ್ಪವಾಗಿದೆ ಎಲ್ಲರೊಡನೆಯೂ ಪ್ರೀತಿಯಿಂದ ಓಡಾಡಿಕೊಂಡಿರು (ಹೊಂದಿಕೊಂಡು ಹೋಗು), ಅತ್ಯುತ್ತಮವಾದ ಮಾರ್ಗದಲ್ಲಿ ನಡೆ ಲೋಕಕ್ಕೆಲ್ಲಾ ಅಮೃತವನ್ನು ಸುರಿದುಕೊಡು, ವಿಷದ ಹನಿಯನ್ನು ಎಲ್ಲಿಯೂ ಹಾಕಬೇಡ ನಿನ್ನ ಪ್ರೇಮಪೂರ್ವಕವಾದ ಮತ್ತು ಹಿತವನ್ನುಂಟುಮಾಡಬಲ್ಲ ವ್ಯವಹಾರವೇ ಅಮೃತ, ದ್ವೇಷಯುಕ್ತವಾದ ವ್ಯವಹಾರವೇ ವಿಷ.

12 ಅನ್ಯರ ದೋಷಗಳನ್ನು ಹುಡುಕಿ ನೋಡುವುದರಿಂದ, ನಿನ್ನಲ್ಲಿ ದೋಷಗಳು ವೃದ್ಧಿಯಾಗುತ್ತವೆ, ಮತ್ತು ಅನ್ಯರ ಗುಣಗಳನ್ನು ಮೆಚ್ಚುವುದರಿಂದ ನಿನ್ನ ಗುಣಗಳು ಹೆಚ್ಚುತ್ತಿರುತ್ತವೆ.

13 ಯಾರಾದರೂ ಒಂದುಗಂಟೆಯುವರೆಗೆ ನಿನ್ನೊಡನೆ ಸೇರಿದ್ದರೆ, ನಿನ್ನ ಪ್ರೇಮಯುಕ್ತವಾದ ಮತ್ತು ಸರಳವಾದ (ಸಹಜವಾದ) ವ್ಯವಹಾರದಿಂದ ಅವನ ಮನಸ್ಸಿನೊಳಕ್ಕೆ ಅಮೃತವನ್ನು ತುಂಬು. ನಿನ್ನಬಳಿಯಿಂದ ಅವನು ಯಾವ ವಿಷವನ್ನೂ ತೆಗೆದುಕೊಂಡುಹೋಗದಂತೆ ಎಚ್ಚರಿಕೆಯಿಂದಿರು ಮನಸ್ಸಿನಿಂದ ವಿಷವನ್ನು (ಕ್ರೋಧಾದಿ ಭಾವಗಳು) ಸಂಪೂರ್ಣವಾಗಿ ಹೊರಕ್ಕೆ ತೆಗೆದು ಬಿಸುಟು ಅಮೃತವನ್ನು ತುಂಬಿಕೊ ಮತ್ತು ಎಲ್ಲೆಲ್ಲೂ ಅದನ್ನೇ ಹಂಚುತ್ತಿರು

14. ವ್ಯವಹಾರದಲ್ಲಿ ಎಲ್ಲವೂ ಸಮನಾಗಿರುವುದು ಅಸಂಭವ, ಕೆಲವು ಹಾನಿಕರಗಳಾಗಿಯೂ ಇರಬಹುದು ಆದುದರಿಂತ ಸನ್ನಿವೇಶಕ್ಕನುಸಾರವಾಗಿ ವಿರುದ್ಧಸ್ಥಿತಿಯುಂಟಾಗಿದ್ದರೂ, ಮನಸ್ಸಿನಲ್ಲಿ ಸಮತಾಭಾವವನ್ನಿಟ್ಟುಕೊ, ಆತ್ಮಸ್ವರೂಪದೃಷ್ಟಿಯಿಂದ ಎಲ್ಲರನ್ನೂ ಸಮವೆಂದು ತಿಳಿ. ಯಾರನ್ನೂ ನಿನಗಿಂತ ಸಣ್ಣವನೆಂದು (ತುಚ್ಛನೆಂದು) ಭಾವಿಸಿ ಅವನನ್ನು ತಿರಸ್ಕಾರ ಮಾಡದಿರು. ನಿನ್ನ ದೊಡ್ಡಸ್ತಿಕೆಗಾಗಿ ಗರ್ವವನ್ನು ಮಾಡಬೇಡ

15 ತಾನು ಎಲ್ಲರಿಗಿಂತಲೂ ಸಣ್ಣವನೆಂದಾವನು ತಿಳಿಯುವನೋ ಅವನೇ ದೊಡ್ಡವನು (ಮಹತ್ವವುಳ್ಳವನು) ಈ ಮಂತ್ರವನ್ನು ಸದಾ ಸ್ಮರಣೆಯಲ್ಲಿಟ್ಟುಕೊ (ನೆನೆಯುತ್ತಿರು)

16. ಕಾರ್ಯಸಿದ್ಧಿಮಾಡಿಕೊಳ್ಳುವುದರಲ್ಲಿ ಕೀರ್ತಿಕಾಮನೆ (ಯಶಸ್ಸನ್ನು ಪಡೆಯುವ ಇಚ್ಛೆ) ಯು ಬಹಳ ದೊಡ್ಡ ಪ್ರತಿಬಂಧಕ (ಅಡ್ಡಿ, ತಡೆ, ವಿಘ್ನ) ವಾಗಿದೆ ಹಣವನ್ನೂ, ಹೆಂಗಸನ್ನೂ ತ್ಯಾಗಮಾಡುವುದು [ಬಿಟ್ಟುಬಿಡುವುದು] ಸುಲಭ. ಆದರೆ, ಕೀರ್ತಿಯ ಲೋಭ [ಆತ್ಯಾಸೆ] ವನ್ನು ಬಿಡುವುದು ಬಹಳಕಷ್ಟ.

17 ಗುಣವೂ, ದೋಷವೂ ಎಲ್ಲರಲ್ಲೂ ಇವೆ ತಪ್ಪು [ಭ್ರಾಂತಿ] ಎಲ್ಲರಿಂದಲೂ ಆಗುತ್ತದೆ. ನೀನು ಯಾರದಾದರೂ, ಯಾವುದಾದರೂ ಕಾರ್ಯವನ್ನು ನೋಡಿದೊಡನೆಯೇ, ಅದರಲ್ಲಿ ದೋಷವನ್ನು ಹುಡುಕಲಾರಂಭಿಸಿದರೆ, ನಿನ್ನ ವರ್ತನೆಯು [ನಡತೆ] ಎಲ್ಲಕ್ಕಿಂತ ಮೊದಲೇ ಕೆಟ್ಟುಹೋಗುತ್ತದೆ. ನೀನು ಅತ್ಯುತ್ತಮವಾದ ಕೆಲಸದಲ್ಲಿಯೂ ದೋಷವನ್ನೇ ನೋಡುವವನಾದರೆ, ನೀನೂ ಸುಟ್ಟುಹೋಗಿ ಅನ್ಯರನ್ನೂ ಸುಟ್ಟುಹೋಗುವಂತೆ

ಮಾಡುತ್ತೀಯೆ ಇದಕ್ಕೆ ಪ್ರತಿಯಾಗಿ ಗುಣಗಳನ್ನೇ ನೋಡಿ ಮೆಚ್ಚುವೆಯಾದರೆ, ನಿನ್ನ ನಡತೆಯು ಸಾತ್ವಿಕವಾಗುತ್ತದೆ, ಸಂತೋಷ ಹೆಚ್ಚುತ್ತದೆ, ಮತ್ತು ಶಾಂತಿ ದೊರೆಯುತ್ತದೆ ಎಲ್ಲರಲ್ಲಿಯೂ ಗುಣವನ್ನು ನೋಡುವ ಅಭ್ಯಾಸವನ್ನಿಡು ಎಷ್ಟು ಆನಂದಲಭಿಸುವುದೋ ಅದನ್ನು ಬಳಿಕ ನೋಡು.

18. ಯಾರತಪ್ಪನ್ನೂ ಹುಡುಕಬೇಡ, ತಪ್ಪನ್ನು ನೋಡಿದರೆ ಅದನ್ನು ಮರೆತುಬಿಡು ಅವನ ಒಳ್ಳೆಯ ಹೇತು [ಅಭಿಪ್ರಾಯ, ಉದ್ದೇಶ] ವನ್ನೂ, ಶ್ರಮವನ್ನೂ ಮತ್ತು ಕಾರ್ಯತತ್ಪರತೆಯನ್ನೂ ಮನಃಪೂರ್ವಕವಾಗಿ ಆದರಿಸು [ಮೆಚ್ಚು]. ಅವನ ಕಾರ್ಯದಲ್ಲಿ ಗುಣಗಳನ್ನು ಹುಡುಕು ಒಳ್ಳೆಯದನ್ನು ಅನುಸಂಧಾನಮಾಡು ಇದರಿಂದ ನೀನು ಒಳ್ಳೆಯ ಮನುಷ್ಯನೂ ಮತ್ತು ಗುಣವಂತನೂ ಆಗಿಹೋಗುತ್ತೀಯೆ

19 ಎಲ್ಲಿ ಆಸ್ಪತ್ರೆಗಳೂ ಮತ್ತು ಡಾಕ್ಟರುಗಳೂ ಹೆಚ್ಚಾಗಿರುವರೋ, ಅಲ್ಲಿಯ ಜನರ ಶರೀರಸಂಬಂಧವಾದ ಪತನವಾಗಿಹೋಗಿದೆಯೆಂದು ತಿಳಿ. [ಜನರ ಸಹಜವಾದ ಆರೋಗ್ಯಸ್ಥಿತಿ ಕಟ್ಟುಹೋಗಿರುತ್ತದೆ ಎಂದರ್ಥ]. ಹಾಗೆಯೇ ಎಲ್ಲಿ ವಕೀಲರು ಹೆಚ್ಚಾಗಿರುವರೋ ಮತ್ತು ನ್ಯಾಯಸ್ಥಾನಗಳಲ್ಲಿ ಜನಸಮೂಹವಿರುವುದೋ ಅಲ್ಲಿಯ ಜನರ ವಿಶ್ವಾಸಪಾತ್ರತೆಯು [ಲೇವಾದೇವಿಯಲ್ಲಿ ಸತ್ಯವಾಗಿ ನಡೆಯುವುವಿಕೆ, ಪರಸ್ಪರ ವಿಶ್ವಾಸ] ಬಹುಮಟ್ಟಿಗೆ ನಷ್ಟವಾಗಿಹೋಗಿದೆಯೆಂದು ತಿಳಿ.

20. ಕೇವಲ ಔಷಧಿ ಮತ್ತು ಆಸ್ಪತ್ರೆಗಳಿಂದಲೇ ರೋಗಗಳು ಸಮೂಲವಾಗಿ ನಾಶವಾಗುವುದಿಲ್ಲ. ರೋಗಗಳ ಸಂಪೂರ್ಣನಾಶವಾದರೋ ಇಂದ್ರಿಯ ಸಂಯಮ ಮತ್ತು ಮನಃಶುದ್ಧಿಯುಂಟಾದಬಳಿಕವೇ. ಇಂದ್ರಿಯ ಸಂಯಮ [ಪಂಚೇಂದ್ರಿಯ ಸುಖಾನುಭವದಲ್ಲಿ ಮಿತಿ—ತಡೆ] ಮತ್ತು ಮನಃಶುದ್ಧಿಗಳು ಎಂತಹ ಔಷಧಿಗಳೆಂದರೆ—ಅವುಗಳಿಂದ ಶರೀರದ ಆರೋಗ್ಯ ಸ್ಥಿತಿಯಂತೂ ದೊರಕುತ್ತಲೇ ಇದೆ. ಅಲ್ಲದೆ ಪಾರಮಾರ್ಥಿಕ (ಮೋಕ್ಷಸಾಧನೆಗೆ ಬೇಕಾದ) ಸ್ವಾಸ್ಥ್ಯ (ಸ್ಥಿತಿ) ವೂ ಲಭಿಸುತ್ತದೆ. ಆದುದರಿಂದ ಪಂಚೇಂದ್ರಿಗಳನ್ನು ವಶಪಡಿಸಿಕೊಳ್ಳಲು ಮತ್ತು ಮನಸ್ಸನ್ನು ಶುದ್ಧವಾದುದನ್ನಾಗಿ ಮಾಡಿಕೊಳ್ಳಲು ನಿರಂತರವೂ ಪ್ರಯತ್ನಮಾಡುತ್ತಿರು

21. ಸತ್ಪುರುಷರ ಸಹವಾಸದಿಂದ ಇಂದ್ರಿಯಸಂಯಮ ಮತ್ತು

ಮನಃಶುದ್ಧಿಗಳು ಉಂಟಾಗುತ್ತವೆ ಆದುದರಿಂದ ಕೆಟ್ಟಸಹವಾಸವನ್ನು ಬಿಟ್ಟುಬಿಡಲು ಯಾವಾಗಲೂ ಪ್ರಯತ್ನಮಾಡುತ್ತಿರು

22. ಕೆಟ್ಟ ಸಹವಾಸದಿಂದ ದೂರವಿರಬೇಕು ಮತ್ತು ಒಳ್ಳೆಯ ಸಹವಾಸದ ಆಶ್ರಯವನ್ನು ಹೊಂದಬೇಕು ವಿಷಯಲಂಪಟರಾದ ಜನರ ಸಂಗ (ಸ್ನೇಹ) ವಾದರೋ ಅತ್ಯಂತ ಹಾನಿಕರವಾಗಿದೆ. ಮನುಷ್ಯರ ಮಾತೇನು? ಮನಸ್ಸನ್ನು ಮೋಹಗೊಳಿಸುವ ಮತ್ತು ಪಂಚೇಂದ್ರಿಯಗಳನ್ನು ಆಕರ್ಷಿಸುವ ಅಚೇತನವಾದ ಭೋಗ್ಯವಸ್ತುಗಳ ಸಂಗ (ಸಂಬಂಧ–ಅಂಟು) ವೂ ತ್ಯಾಜ್ಯ (ಬಿಡುವುದಕ್ಕೆ ಯೋಗ್ಯವಾದುದು) ವಾಗಿದೆ

23. ರೋಗಿಯು ರೋಗದಿಂದ ಮುಕ್ತನಾಗುವ (ಬಿಡುಗಡೆಹೊಂದುವ) ವಿಚಾರಮಾಡುತ್ತಿರುತ್ತಾನೆ, ಹಾಗೆಯೇ ಜ್ಞಾನಿಯಾದವನು ಭೋಗರೂಪವಾದ ರೋಗದಿಂದ ಮುಕ್ತನಾಗಲು ಇಚ್ಛಿಸುತ್ತಿರುತ್ತಾನೆ

24. ಜ್ಞಾನಿಯು, ಜೀವರುಗಳೆಲ್ಲರೂ ಕರ್ಮಕ್ಕೆ ಅಧೀನರೆಂದು ತಿಳಿದು, ಅವರಲ್ಲಿ ರಾಗದ್ವೇಷಗಳನ್ನು ಮಾಡದೆ ಸಮಭಾವವನ್ನಿಟ್ಟಿರುತ್ತಾನೆ

25. ಆತ್ಮನು ಶುಭವೋ ಅಶುಭವೋ ಆದ ಕರ್ಮ ಬೀಜಗಳನ್ನು ಬಿತ್ತುತ್ತಾನೆ ಅವನಿಗೆ ಅದಕ್ಕೆ ತಕ್ಕ ಫಲವು ದೊರಕುತ್ತದೆ

26. ರಸಾಯನ (ಯಾವ ಔಷಧದ ಸೇವನೆಯಿಂದ ಮನುಷ್ಯನು ಮುದುಕನೂ, ರೋಗಿಯೂ ಆಗುವುದಿಲ್ಲವೋ ಅದು) ವನ್ನು ತಿನ್ನುವವನು ಪಥ್ಯಮಾಡುವುದು ಅವಶ್ಯಕವಾಗುತ್ತದೆ ಜ್ಞಾನಿಗೆ ಚಾರಿತ್ರವು ಅವಶ್ಯಕವಾಗಿದೆ. ಪಥ್ಯವಿಲ್ಲದ ರಸಾಯನವು ಹೇಗೆ ಲಾಭದಾಯಕವಾಗುವುದಿಲ್ಲವೋ ಹಾಗೆಯೇ ಚಾರಿತ್ರವಿಲ್ಲದ ಜ್ಞಾನವು ವಿಶೇಷಪ್ರಯೋಜನಕಾರಿಯಾಗುವುದಿಲ್ಲ

27. ಕಣ್ಣಿಲ್ಲದ ಹೊರತು ಶರೀರವು ನಿರರ್ಥಕ (ಪ್ರಯೋಜನವಿಲ್ಲದ್ದು) ವಾಗುತ್ತದೆ ಅದೇರೀತಿ ಧರ್ಮವಿಲ್ಲದಹೊರತು ಮನುಷ್ಯಜನ್ಮವೂ ನಿರರ್ಥಕವಾಗುತ್ತದೆ.

28 ಜಲೂಕವು (ನೀರಿನಲ್ಲಿರುವ ಉಂಬತಿಯೆಂಬ ಪ್ರಾಣಿ) ಕೊಳೆತ ರಕ್ತವನ್ನು ಕುಡಿದು ಆನಂದಪಡುವಂತೆ, ಅಜ್ಞಾನಿಯು ಪಂಚೇಂದ್ರಿಯವಿಷಯ ಮತ್ತು ಕಷಾಯಗಳಲ್ಲಿ ಆನಂದವನ್ನು ಹೊಂದುತ್ತಾನೆ ಮತ್ತು ಸಂಸಾರದಲ್ಲಿ ಸುತ್ತುತ್ತಿರುತ್ತಾನೆ

29 ಹೇಗೆ ಭಂಗಿ, ಹೆಂಡ, ಅಫೀಮು ಮೊದಲಾದ ವಸ್ತುಗಳು ಶರೀರ ದಲ್ಲಿ ಮತ್ತನ್ನು (ಬುದ್ಧಿವಿಕಾರ) ಉಂಟುಮಾಡುತ್ತವೆಯೋ, ಹಾಗೆಯೇ, ಆತ್ಮ ನಲ್ಲಿ ಹಿಂಸೆ, ವಿಷಯಸುಖ ಮತ್ತು ಕಷಾಯ ಇವುಗಳು ಮತ್ತನ್ನುಂಟು ಮಾಡುತ್ತವೆ

30. ಕಲ್ಲಿನಿಂದ ಮನುಷ್ಯನು ತಲೆಯನ್ನು ಒಡೆದುಕೊಂಡರೆ, ಅದರಲ್ಲಿ ಕಲ್ಲಿನ ದೋಷವೇನಿದೆ? ಅದೇರೀತಿ ಜೀವನು ವಿಷಯಸುಖ ಮತ್ತು ಕಷಾಯ ಇವುಗಳಲ್ಲಿ ಸಿಕ್ಕಿಬಿದ್ದರೆ, ಅದರಲ್ಲಿ ವಿಷಯಕಷಾಯಗಳ ದೋಷವೇನಿದೆ? ಕಲ್ಲು ಹೇಗೆ ನಿರ್ದೋಷವಾಗಿದೆಯೋ ಹಾಗೆಯೇ ವಿಷಯಕಷಾಯಗಳ ಸಂಯೋಗ (ಸಂಬಂಧ) ವೂ ನಿರ್ದೋಷವಾಗಿದೆ

31 ಅಜ್ಞಾನಿಗೆ ಮಾವನ ಬೈಗುಳವು ಸಿಹಿಯಾಗಿ ಕಾಣುತ್ತದೆ, ತಂದೆ ತಾಯಿಯರು ಹಿತದೃಷ್ಟಿಯಿಂದ ಮಾಡುವ ಶಿಕ್ಷೆಯು (ಆಕ್ಷೇಪಣೆ) ಕಹಿಯಾಗಿ ಕಾಣುತ್ತದೆ. ಅದೇರೀತಿ ಜೀವನು ಧರ್ಮಾನುಷ್ಠಾನದಲ್ಲಿ ದುಃಖವನ್ನೂ, ವಿಷಯಕಷಾಯರೂಪವಾದ ಪಾಪಪ್ರವೃತ್ತಿಯಲ್ಲಿ ಸುಖವನ್ನೂ ತಿಳಿಯುತ್ತಾನೆ

32. ಲೋಕದಲ್ಲಿರುವ ಪ್ರತಿಯೊಂದು ಪ್ರಾಣಿಯೂ ಪರಿಗ್ರಹದ ಕೈಯ್ಯ ಲ್ಲಿದೆ (ಹಿಡಿತದಲ್ಲಿದೆ) ಅನರ್ಥದ ಮತ್ತು ಘೋರವಾದ ಅತ್ಯಾಚಾರದ ಮೂಲವು (ಬೇರು) ಪರಿಗ್ರಹವೇ ಆಗಿದೆ ಯಾವ ಮರ (ಸ್ಥಾನ, ವಾಸ ಸ್ಥಳ, ಸಾಧುಜನ ಮೊದಲಾದವರ ನಿವಾಸ) ದಲ್ಲಿ ಅಪಾರ ದ್ರವ್ಯವಿದೆಯೋ ಅಲ್ಲಿ ಸರ್ವಪ್ರಕಾರವಾದ ಕಲಹವಿದೆ ಪರಿಗ್ರಹಗಳನ್ನು ಸ್ವೀಕರಿಸುವುದರಲ್ಲಿ ದುಃಖ, ದಾನಮಾಡುವುದರಲ್ಲಿ ದುಃಖ, ಅನುಭವಿಸುವುದರಲ್ಲಿ ದುಃಖ. ಹೊಂದಿರುವುದರಲ್ಲಿ ದುಃಖ. ಇಂತಹ ದುಃಖದಾಯಕವಾದ ಪರಿಗ್ರಹಕ್ಕೆ ಧಿಕ್ಕಾರವಿರಲಿ!

ಸಮಾಪ್ತವಾದುದು.



# ಶುದ್ಧಾಶುದ್ಧಪತ್ರಿಕೆ

| ಪುಟ | ವಚನ | ಅಶುದ್ಧ | ಶುದ್ಧ |
|---|---|---|---|
| 5 | 34 | ಇರುವುದಿಲ್ಲವೊ | ಬಿಟ್ಟುಹೋಗುವುದಿಲ್ಲವೋ |
| 15 | 19 | ಸುಲಭವಲ್ಲ | ಸುಲಭ |
| 31 | 64 | ಇಚಿಸುವೆಯೋ | ಇಚ್ಛಿಸುವೆಯೋ |
| 32 | 87 | ಪ್ರವೃತ್ತಿಯಲ್ಲಿ | ಉತ್ತಮಪ್ರವೃತ್ತಿಗಳಲ್ಲಿ |
| 35 | 2 | ಮಾಗವನ್ನು | ಮಾರ್ಗವನ್ನು |
| 38 | 20 | ರೋರ್ಗವನ್ನು | ರೋಗವನ್ನು |
| 59 | 64 | ಕಾಲಾದಿಭಾವ | ಕಾಲಭಾವಾದಿ |
| 64 | 93 | ಗಣವು | ಗುಣವು |

13. ಯಾರಾದರೂ ಒಂದುಗಂಟೆಯವರೆಗೆ ನಿನ್ನೊಡನೆ ಸೇರಿದ್ದರೆ, ನಿನ್ನ ಪ್ರೇಮಯುಕ್ತವಾದ ಮತ್ತು ಸರಳವಾದ (ಸಹಜವಾದ) ವ್ಯವಹಾರದಿಂದ ಅವನ ಮನಸ್ಸಿನೊಳಕ್ಕೆ ಅಮೃತವನ್ನು ತುಂಬು. ನಿನ್ನಬಳಿಯಿಂದ ಅವನು ಯಾವ ವಿಷವನ್ನೂ ತೆಗೆದುಕೊಂಡುಹೋಗದಂತೆ ಎಚ್ಚರಿಕೆಯಿಂದಿರು. ಮನಸ್ಸಿನಿಂದ ವಿಷವನ್ನು (ಕ್ರೋಧಾದಿ ಭಾವಗಳು) ಸಂಪೂರ್ಣವಾಗಿ ಹೊರಕ್ಕೆ ತೆಗೆದು ಬಿಸುಟು ಅಮೃತವನ್ನು ತುಂಬಿಕೊ ಮತ್ತು ಎಲ್ಲೆಲ್ಲೂ ಅದನ್ನೇ ಹಂಚುತ್ತಿರು.

14. ವ್ಯವಹಾರದಲ್ಲಿ ಎಲ್ಲವೂ ಸಮನಾಗಿರುವುದು ಅಸಂಭವ, ಕೆಲವು ಹಾನಿಕರಗಳಾಗಿಯೂ ಇರಬಹುದು. ಆದುದರಿಂತ ಸನ್ನಿವೇಶಕ್ಕನುಸಾರವಾಗಿ ವಿರುದ್ಧಸ್ಥಿತಿಯುಂಟಾಗಿದ್ದರೂ, ಮನಸ್ಸಿನಲ್ಲಿ ಸಮತಾಭಾವವನ್ನಿಟ್ಟುಕೊ; ಆತ್ಮಸ್ವರೂಪದೃಷ್ಟಿಯಿಂದ ಎಲ್ಲರನ್ನೂ ಸಮವೆಂದು ತಿಳಿ. ಯಾರನ್ನೂ ನಿನಗಿಂತ ಸಣ್ಣವನೆಂದು (ತುಚ್ಛನೆಂದು) ಭಾವಿಸಿ ಅವನನ್ನು ತಿರಸ್ಕಾರ ಮಾಡದಿರು. ನಿನ್ನ ದೊಡ್ಡಸ್ತಿಕೆಗಾಗಿ ಗರ್ವವನ್ನು ಮಾಡಬೇಡ.

15. ತಾನು ಎಲ್ಲರಿಗಿಂತಲೂ ಸಣ್ಣವನೆಂದಾವನು ತಿಳಿಯುವನೋ ಅವನೇ ದೊಡ್ಡವನು (ಮಹತ್ವವುಳ್ಳವನು). ಈ ಮಂತ್ರವನ್ನು ಸದಾ ಸ್ಮರಣೆಯಲ್ಲಿಟ್ಟುಕೊ (ನೆನೆಯುತ್ತಿರು).

16. ಕಾರ್ಯಸಿದ್ಧಿಮಾಡಿಕೊಳ್ಳುವುದರಲ್ಲಿ ಕೀರ್ತಿಕಾಮನೆ (ಯಶಸ್ಸನ್ನು ಪಡೆಯುವ ಇಚ್ಛೆ) ಯು ಬಹಳ ದೊಡ್ಡ ಪ್ರತಿಬಂಧಕ (ಅಡ್ಡಿ, ತಡೆ, ವಿಘ್ನ) ವಾಗಿದೆ. ಹಣವನ್ನೂ, ಹೆಂಗಸನ್ನೂ ತ್ಯಾಗಮಾಡುವುದು [ಬಿಟ್ಟು ಬಿಡುವುದು] ಸುಲಭ. ಆದರೆ, ಕೀರ್ತಿಯ ಲೋಭ [ಅತ್ಯಾಸೆ] ವನ್ನು ಬಿಡುವುದು ಬಹಳಕಷ್ಟ.

17. ಗುಣವೂ, ದೋಷವೂ ಎಲ್ಲರಲ್ಲೂ ಇವೆ. ತಪ್ಪು [ಭ್ರಾಂತಿ] ಎಲ್ಲರಿಂದಲೂ ಆಗುತ್ತದೆ. ನೀನು ಯಾರದಾದರೂ, ಯಾವುದಾದರೂ ಕಾರ್ಯವನ್ನು ನೋಡಿದೊಡನೆಯೇ, ಅದರಲ್ಲಿ ದೋಷವನ್ನು ಹುಡುಕಲಾರಂಭಿಸಿದರೆ, ನಿನ್ನ ವರ್ತನೆಯು [ನಡತೆ] ಎಲ್ಲಕ್ಕಿಂತ ಮೊದಲೇ ಕೆಟ್ಟುಹೋಗುತ್ತದೆ. ನೀನು ಅತ್ಯುತ್ತಮವಾದ ಕೆಲಸದಲ್ಲಿಯೂ ದೋಷವನ್ನೇ ನೋಡುವವನಾದರೆ, ನೀನೂ ಸುಟ್ಟುಹೋಗಿ, ಅನ್ಯರನ್ನೂ ಸುಟ್ಟುಹೋಗುವಂತೆ

ಮಾಡುತ್ತೀಯೆ. ಇದಕ್ಕೆ ಪ್ರತಿಯಾಗಿ ಗುಣಗಳನ್ನೇ ನೋಡಿ ಮೆಚ್ಚುವೆಯಾದರೆ, ನಿನ್ನ ನಡತೆಯು ಸಾತ್ವಿಕವಾಗುತ್ತದೆ, ಸಂತೋಷ ಹೆಚ್ಚುತ್ತದೆ, ಮತ್ತು ಶಾಂತಿ ದೊರೆಯುತ್ತದೆ. ಎಲ್ಲರಲ್ಲಿಯೂ ಗುಣವನ್ನು ನೋಡುವ ಅಭ್ಯಾಸವನ್ನಿಡು. ಎಷ್ಟು ಆನಂದಲಭಿಸುವುದೋ ಅದನ್ನು ಬಳಿಕ ನೋಡು.

18. ಯಾರತಪ್ಪನ್ನೂ ಹುಡುಕಬೇಡ; ತಪ್ಪನ್ನು ನೋಡಿದರೆ ಅದನ್ನು ಮರೆತುಬಿಡು. ಅವನ ಒಳ್ಳೆಯ ಹೇತು [ಅಭಿಪ್ರಾಯ, ಉದ್ದೇಶ] ವನ್ನೂ, ಶ್ರಮವನ್ನೂ ಮತ್ತು ಕಾರ್ಯತತ್ಪರತೆಯನ್ನೂ ಮನಃಪೂರ್ವಕವಾಗಿ ಆದರಿಸು [ಮೆಚ್ಚು]. ಅವನ ಕಾರ್ಯದಲ್ಲಿ ಗುಣಗಳನ್ನು ಹುಡುಕು. ಒಳ್ಳೆಯದನ್ನು ಅನುಸಂಧಾನಮಾಡು. ಇದರಿಂದ ನೀನು ಒಳ್ಳೆಯ ಮನುಷ್ಯನೂ ಮತ್ತು ಗುಣವಂತನೂ ಆಗಿಹೋಗುತ್ತೀಯೆ.

19. ಎಲ್ಲಿ ಆಸ್ಪತ್ರೆಗಳೂ ಮತ್ತು ಡಾಕ್ಟರುಗಳೂ ಹೆಚ್ಚಾಗಿರುವರೋ, ಅಲ್ಲಿಯ ಜನರ ಶರೀರಸಂಬಂಧವಾದ ಪತನವಾಗಿಹೋಗಿದೆಯೆಂದು ತಿಳಿ. [ಜನರ ಸಹಜವಾದ ಆರೋಗ್ಯಸ್ಥಿತಿ ಕೆಟ್ಟುಹೋಗಿರುತ್ತದೆ ಎಂದರ್ಥ]. ಹಾಗೆಯೇ ಎಲ್ಲಿ ವಕೀಲರು ಹೆಚ್ಚಾಗಿರುವರೋ ಮತ್ತು ನ್ಯಾಯಸ್ಥಾನಗಳಲ್ಲಿ ಜನಸಮೂಹವಿರುವುದೋ ಅಲ್ಲಿಯ ಜನರ ವಿಶ್ವಾಸಪಾತ್ರತೆಯು [ಲೇವಾದೇವಿಯಲ್ಲಿ ಸತ್ಯವಾಗಿ ನಡೆಯುವುವಿಕೆ, ಪರಸ್ಪರ ವಿಶ್ವಾಸ] ಬಹುಮಟ್ಟಿಗೆ ನಷ್ಟವಾಗಿಹೋಗಿದೆಯೆಂದು ತಿಳಿ.

20. ಕೇವಲ ಔಷಧಿ ಮತ್ತು ಆಸ್ಪತ್ರೆಗಳಿಂದಲೇ ರೋಗಗಳು ಸಮೂಲವಾಗಿ ನಾಶವಾಗುವುದಿಲ್ಲ. ರೋಗಗಳ ಸಂಪೂರ್ಣನಾಶವಾದರೋ ಇಂದ್ರಿಯ ಸಂಯಮ ಮತ್ತು ಮನಃಶುದ್ಧಿಯುಂಟಾದಬಳಿಕವೇ. ಇಂದ್ರಿಯ ಸಂಯಮ [ಪಂಚೇಂದ್ರಿಯ ಸುಖಾನುಭವದಲ್ಲಿ ಮಿತಿ–ತಡೆ] ಮತ್ತು ಮನಃಶುದ್ಧಿಗಳು ಎಂತಹ ಔಷಧಿಗಳೆಂದರೆ–ಅವುಗಳಿಂದ ಶರೀರದ ಆರೋಗ್ಯಸ್ಥಿತಿಯಂತೂ ದೊರಕುತ್ತಲೇ ಇದೆ. ಅಲ್ಲದೆ ಪಾರಮಾರ್ಥಿಕ(ಮೋಕ್ಷಸಾಧನೆಗೆ ಬೇಕಾದ) ಸ್ವಾಸ್ಥ್ಯ (ಸ್ಥಿತಿ) ವೂ ಲಭಿಸುತ್ತದೆ. ಆದುದರಿಂದ ಪಂಚೇಂದ್ರಿಗಳನ್ನು ವಶಪಡಿಸಿಕೊಳ್ಳಲು ಮತ್ತು ಮನಸ್ಸನ್ನು ಶುದ್ಧವಾದುದನ್ನಾಗಿ ಮಾಡಿಕೊಳ್ಳಲು ನಿರಂತರವೂ ಪ್ರಯತ್ನಮಾಡುತ್ತಿರು.

21. ಸತ್ಪುರುಷರ ಸಹವಾಸದಿಂದ ಇಂದ್ರಿಯಸಂಯಮ ಮತ್ತು

ಮನಃಶುದ್ಧಿಗಳು ಉಂಟಾಗುತ್ತವೆ. ಆದುದರಿಂದ ಕೆಟ್ಟಸಹವಾಸವನ್ನು ಬಿಟ್ಟುಬಿಡಲು ಯಾವಾಗಲೂ ಪ್ರಯತ್ನಮಾಡುತ್ತಿರು.

22. ಕೆಟ್ಟ ಸಹವಾಸದಿಂದ ದೂರವಿರಬೇಕು ಮತ್ತು ಒಳ್ಳೆಯ ಸಹವಾಸದ ಆಶ್ರಯವನ್ನು ಹೊಂದಬೇಕು. ವಿಷಯಲಂಪಟರಾದ ಜನರ ಸಂಗ (ಸ್ನೇಹ) ವಾದರೋ ಅತ್ಯಂತ ಹಾನಿಕರವಾಗಿದೆ. ಮನುಷ್ಯರ ಮಾತೇನು? ಮನಸ್ಸನ್ನು ಮೋಹಗೊಳಿಸುವ ಮತ್ತು ಪಂಚೇಂದ್ರಿಯಗಳನ್ನು ಆಕರ್ಷಿಸುವ ಅಚೇತನವಾದ ಭೋಗ್ಯವಸ್ತುಗಳ ಸಂಗ (ಸಂಬಂಧ—ಅಂಟು) ವೂ ತ್ಯಾಜ್ಯ (ಬಿಡುವುದಕ್ಕೆ ಯೋಗ್ಯವಾದುದು) ವಾಗಿದೆ.

23. ರೋಗಿಯು ರೋಗದಿಂದ ಮುಕ್ತನಾಗುವ (ಬಿಡುಗಡೆಹೊಂದುವ) ವಿಚಾರಮಾಡುತ್ತಿರುತ್ತಾನೆ; ಹಾಗೆಯೇ ಜ್ಞಾನಿಯಾದವನು ಭೋಗರೂಪವಾದ ರೋಗದಿಂದ ಮುಕ್ತನಾಗಲು ಇಚ್ಛಿಸುತ್ತಿರುತ್ತಾನೆ.

24. ಜ್ಞಾನಿಯು, ಜೀವರುಗಳೆಲ್ಲರೂ ಕರ್ಮಕ್ಕೆ ಅಧೀನರೆಂದು ತಿಳಿದು. ಅವರಲ್ಲಿ ರಾಗದ್ವೇಷಗಳನ್ನು ಮಾಡದೆ ಸಮಭಾವವನ್ನಿಟ್ಟಿರುತ್ತಾನೆ.

25. ಆತ್ಮನು ಶುಭವೋ ಅಶುಭವೋ ಆದ ಕರ್ಮ ಬೀಜಗಳನ್ನು ಬಿತ್ತುತ್ತಾನೆ. ಅವನಿಗೆ ಅದಕ್ಕೆ ತಕ್ಕ ಫಲವು ದೊರಕುತ್ತದೆ.

26. ರಸಾಯನ (ಯಾವ ಔಷಧದ ಸೇವನೆಯಿಂದ ಮನುಷ್ಯನು ಮುದುಕನೂ, ರೋಗಿಯೂ ಆಗುವುದಿಲ್ಲವೋ ಅದು) ವನ್ನು ತಿನ್ನುವವನು ಪಥ್ಯಮಾಡುವುದು ಅವಶ್ಯಕವಾಗುತ್ತದೆ. ಜ್ಞಾನಿಗೆ ಚಾರಿತ್ರವು ಅವಶ್ಯಕವಾಗಿದೆ. ಪಥ್ಯವಿಲ್ಲದ ರಸಾಯನವು ಹೇಗೆ ಲಾಭದಾಯಕವಾಗುವುದಿಲ್ಲವೋ ಹಾಗೆಯೇ ಚಾರಿತ್ರವಿಲ್ಲದ ಜ್ಞಾನವು ವಿಶೇಷಪ್ರಯೋಜನಕಾರಿಯಾಗುವುದಿಲ್ಲ.

27. ಕಣ್ಣಿಲ್ಲದ ಹೊರತು ಶರೀರವು ನಿರರ್ಥಕ (ಪ್ರಯೋಜನವಿಲ್ಲದ್ದು) ವಾಗುತ್ತದೆ. ಅದೇರೀತಿ ಧರ್ಮವಿಲ್ಲದಹೊರತು ಮನುಷ್ಯಜನ್ಮವೂ ನಿರರ್ಥಕ ವಾಗುತ್ತದೆ.

28. ಜಲೂಕವು (ನೀರಿನಲ್ಲಿರುವ ಊಬತಿಯೆಂಬ ಪ್ರಾಣಿ) ಕೊಳೆತ ರಕ್ತವನ್ನು ಕುಡಿದು ಆನಂದಪಡುವಂತೆ, ಅಜ್ಞಾನಿಯು ಪಂಚೇಂದ್ರಿಯವಿಷಯ ಮತ್ತು ಕಷಾಯಗಳಲ್ಲಿ ಆನಂದವನ್ನು ಹೊಂದುತ್ತಾನೆ ಮತ್ತು ಸಂಸಾರದಲ್ಲಿ ಸುತ್ತುತ್ತಿರುತ್ತಾನೆ.

29. ಹೇಗೆ ಭಂಗಿ, ಹೆಂಡ, ಅಫೀಮು ಮೊದಲಾದ ವಸ್ತುಗಳು ಶರೀರ ದಲ್ಲಿ ಮತ್ತನ್ನು (ಬುದ್ಧಿವಿಕಾರ) ಉಂಟುಮಾಡುತ್ತವೆಯೋ, ಹಾಗೆಯೇ, ಆತ್ಮ ನಲ್ಲಿ ಹಿಂಸೆ, ವಿಷಯಸುಖ ಮತ್ತು ಕಷಾಯ ಇವುಗಳು ಮತ್ತನ್ನುಂಟು ಮಾಡುತ್ತವೆ.

30. ಕಲ್ಲಿನಿಂದ ಮನುಷ್ಯನು ತಲೆಯನ್ನು ಒಡೆದುಕೊಂಡರೆ, ಅದರಲ್ಲಿ ಕಲ್ಲಿನ ದೋಷವೇನಿದೆ? ಅದೇರೀತಿ ಜೀವನು ವಿಷಯಸುಖ ಮತ್ತು ಕಷಾಯ ಇವುಗಳಲ್ಲಿ ಸಿಕ್ಕಿಬಿದ್ದರೆ, ಅದರಲ್ಲಿ ವಿಷಯಕಷಾಯಗಳ ದೋಷವೇನಿದೆ? ಕಲ್ಲು ಹೇಗೆ ನಿರ್ದೋಷವಾಗಿದೆಯೋ ಹಾಗೆಯೇ ವಿಷಯಕಷಾಯಗಳ ಸಂಯೋಗ (ಸಂಬಂಧ) ವೂ ನಿರ್ದೋಷವಾಗಿದೆ.

31. ಅಜ್ಞಾನಿಗೆ ಪಾಪದ ಬೈಗುಳವು ಸಿಹಿಯಾಗಿ ಕಾಣುತ್ತದೆ, ತಂದೆ ತಾಯಿಯರು ಹಿತದೃಷ್ಟಿಯಿಂದ ಮಾಡುವ ಶಿಕ್ಷೆಯು (ಆಕ್ಷೇಪಣೆ) ಕಹಿಯಾಗಿ ಕಾಣುತ್ತದೆ. ಅದೇರೀತಿ ಜೀವನು ಧರ್ಮಾನುಷ್ಠಾನದಲ್ಲಿ ದುಃಖವನ್ನೂ, ವಿಷಯಕಷಾಯರೂಪವಾದ ಪಾಪಪ್ರವೃತ್ತಿಯಲ್ಲಿ ಸುಖವನ್ನೂ ತಿಳಿಯುತ್ತಾನೆ.

32. ಲೋಕದಲ್ಲಿರುವ ಪ್ರತಿಯೊಂದು ಪ್ರಾಣಿಯೂ ಪರಿಗ್ರಹದ ಕೈಯ್ಯ ಲ್ಲಿದೆ (ಹಿಡಿತದಲ್ಲಿದೆ). ಅನರ್ಥದ ಮತ್ತು ಘೋರವಾದ ಅತ್ಯಾಚಾರದ ಮೂಲವು (ಬೇರು) ಪರಿಗ್ರಹವೇ ಆಗಿದೆ. ಯಾವ ಮಠ (ಸ್ಥಾನ, ವಾಸ ಸ್ಥಳ, ಸಾಧುಜನ ಮೊದಲಾದವರ ನಿವಾಸ) ದಲ್ಲಿ ಅಪಾರ ದ್ರವ್ಯವಿದೆಯೋ ಅಲ್ಲಿ ಸರ್ವಪ್ರಕಾರವಾದ ಕಲಹವಿದೆ. ಪರಿಗ್ರಹಗಳನ್ನು ಸ್ವೀಕರಿಸುವುದರಲ್ಲಿ ದುಃಖ, ದಾನಮಾಡುವುದರಲ್ಲಿ ದುಃಖ, ಅನುಭವಿಸುವುದರಲ್ಲಿ ದುಃಖ, ಹೊಂದಿರುವುದರಲ್ಲಿ ದುಃಖ. ಇಂತಹ ದುಃಖದಾಯಕವಾದ ಪರಿಗ್ರಹಕ್ಕೆ ಧಿಕ್ಕಾರವಿರಲಿ!

ಸಮಾಪ್ತವಾದುದು.



# ಶುದ್ಧಾಶುದ್ಧ ಪತ್ರಿಕೆ

| ಪುಟ | ವಚನ | ಅಶುದ್ಧ | ಶುದ್ಧ |
|---|---|---|---|
| 5 | 34 | ಇರುವುದಿಲ್ಲವೊ | ಬಿಟ್ಟು ಹೋಗುವುದಿಲ್ಲವ್ರೋ |
| 15 | 19 | ಸುಲಭವಲ್ಲ | ಸುಲಭ |
| 31 | 64 | ಇಚಿಸುವೆಯೋ | ಇಚ್ಛಿಸುವೆಯೋ |
| 32 | 87 | ಪ್ರವೃತ್ತಿಯಲ್ಲಿ | ಉತ್ತಮಪ್ರವೃತ್ತಿಗಳಲ್ಲಿ |
| 35 | 2 | ಮಾಗವನ್ನು | ಮಾರ್ಗವನ್ನು |
| 38 | 20 | ರೋರ್ಗವನ್ನು | ರೋಗವನ್ನು |
| 59 | 64 | ಕಾಲಾದಿಭಾವ | ಕಾಲಭಾವಾದಿ |
| 64 | 93 | ಗಣವು | ಗುಣವು. |

